


Vol-14 September- 2017 Issue No. 09 ₹ 10/-

**We pay our Humble Tributes to the Revered Memory of Smt SAROJA V. NAIDU, Vice-President & Life Trustee of Bharat Scouts and Guides, Karnataka who passed away on Monday, the 18th September 2017 at Bengaluru**



ಕರ್ನಾಟಕ ರಾಜ್ಯ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯ ಉಪಾಧ್ಯಕ್ಷಿಣಿ ಹಾಗು ಆಜೀವ ಧರ್ಮದರ್ಶಿಯಾಗಿ ಸೇವೆ ಸಲ್ಲಿಸುತ್ತಿದ್ದ ಚಳವಳಿಯ ಗೌರವಾನ್ವಿತ ಹಿರಿಯ ಸದಸ್ಯರಾದ **ಶ್ರೀಮತಿ ಸರೋಜ ವಿ. ನಾಯ್ಡು ಅವರು** ದಿನಾಂಕ 18 ಸೆಪ್ಟೆಂಬರ್ 2017ರಂದು ಬೆಂಗಳೂರಿನಲ್ಲಿ ನಿಧನಹೊಂದಿದರು.

ರಾಜ್ಯದ ಸ್ಕೌಟ್-ಗೈಡ್‌ಗಳು - ದಳನಾಯಕ - ನಾಯಕಿಯರು, ಸ್ಥಳೀಯ ಸಂಸ್ಥೆಗಳು, ಜಿಲ್ಲಾ ಸಂಸ್ಥೆಗಳು ಹಾಗು ರಾಜ್ಯ ಸಂಸ್ಥೆಯ ಪದಾಧಿಕಾರಿಗಳೆಲ್ಲರ ಪರವಾಗಿ ಶ್ರೀಮತಿ ಸರೋಜ ವಿ.ನಾಯ್ಡು ಅವರಿಗೆ ಶ್ರದ್ಧಾಂಜಲಿ ಅರ್ಪಿಸುತ್ತೇವೆ.



ಸೆಪ್ಟೆಂಬರ್ 10ರಂದು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ 99ನೇ ರಾಜ್ಯ ಪರಿಷತ್ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾಗಿ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಮರು ಆಯ್ಕೆಯಾದ ಸಂದರ್ಭದಲ್ಲಿ ಕರ್ನಾಟಕದ ಸ್ಕೌಟ್ಸ್-ಗೈಡ್ಸ್ ಚಳವಳಿಯ ವಿವಿಧ ಹಂತದ ಪದಾಧಿಕಾರಿಗಳು ಹಾಗೂ ಕಾರ್ಯಕರ್ತರುಗಳು ಡಾ. ಗೊ.ರು ಚನ್ನಬಸಪ್ಪ ಅವರ ನೇತೃತ್ವದಲ್ಲಿ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರನ್ನು ಅಭಿನಂದಿಸಿ, ಸನ್ಮಾನಿಸಿದ ಸಂದರ್ಭದಲ್ಲಿ, ಸಂಸ್ಥೆಯ ಉಪಾಧ್ಯಕ್ಷರುಗಳಾದ ಶ್ರೀಮತಿಯರಾದ ಸರೋಜ ವಿ. ನಾಯ್ಡು, ಶಾಂತ ವಿ. ಆಚಾರ್ಯ, ಭಾರತಿ ಚಂದ್ರಶೇಖರ್ ಹಾಗೂ ಗೀತಾ ನಟರಾಜ್, ಶ್ರೀಯುತರುಗಳಾದ ಕೊಂಡಜ್ಜಿ ಬ. ಷಣ್ಮುಖಪ್ಪ, ಟಿ.ಎಸ್. ಲೂಕಾಸ್, ಎಂ.ಎ. ಖಾಲಿದ್, ಸಿ.ಎಸ್. ರೆಡ್ಡಿ, ಪ್ರಭುದೇವ ಜೆ. ಚಿಗಟೇರಿ, ಜಿ.ಬಿ. ಮಣ್ಣೆಕೇರಿ, ಸಿ. ಮಂಜುಳಾ, ಕೆ.ವಿ. ಶಾಮಲ, ಎಲ್.ಟಿ. ಲೋಕೇಶ್, ಎಂ. ಪ್ರಭಾಕರ ಭಟ್ ಅವರುಗಳು ಚಿತ್ರದಲ್ಲಿದ್ದಾರೆ.




ಸೆಪ್ಟೆಂಬರ್ 10ರಂದು ಡಾ॥ ಆನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ 99ನೇ ರಾಜ್ಯ ಪರಿಷತ್ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾಗಿ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಐದು ವರ್ಷಗಳ ಅವಧಿಗೆ ಮರು ಆಯ್ಕೆಯಾದ ಸಂದರ್ಭದಲ್ಲಿ ಸಂಸ್ಥೆಯ ಧರ್ಮದರ್ಶಿಗಳು ಹಾಗೂ ರಾಜ್ಯ ಸಂಸ್ಥೆಯ ಪ್ರಕಟಣಾ ಸಮಿತಿ ಅಧ್ಯಕ್ಷರಾದ ಡಾ॥ ಗೊ.ರು. ಚನ್ನಬಸಪ್ಪ ಅವರು ಅಭಿನಂದನೆ ಮಾಡುತ್ತಿರುವುದು. ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀ ಟಿ.ಎಸ್. ಲೂಕಾಸ್, ಶ್ರೀಮತಿ ಶಾಂತ ವಿ. ಆಚಾರ್ಯ, ಶ್ರೀ ಎಂ.ಎ. ಖಾಲಿದ್, ಶ್ರೀ ಪ್ರಭುದೇವ ಜೆ. ಚಿಗಟೇರಿ, ಶ್ರೀ ಸಿ.ಎಸ್. ರೆಡ್ಡಿ ಅವರುಗಳು ಚಿತ್ರದಲ್ಲಿದ್ದಾರೆ.

# ಕರ್ನಾಟಕ ಸ್ಕೌಟ್ ಮತ್ತು ಗೈಡ್

ಮಾಸಿಕ ವಾರ್ತಾಪತ್ರಿಕೆ

# Karnataka Scout & Guide

*Monthly News Magazine*



**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ಸಂಸ್ಥೆಯಿಂದ ಸಮಸ್ತರಿಗೆ ದಸರಾ, ದೀಪಾವಳಿ ಹಬ್ಬದ ಹಾಗೂ ಗಾಂಧಿಜಯಂತಿಯ ಶುಭಾಶಯಗಳು**

## ಪರಿವಿಡಿ




ಸಂಚಿಕೆಯ ವಾರ್ಷಿಕ ಚಂದಾ ರೂ. 100 / -
ವಿದ್ಯಾಸಂಸ್ಥೆ ಹಾಗೂ ಸಂಘ-ಸಂಸ್ಥೆಗಳಿಗೆ
ವಾರ್ಷಿಕ ಚಂದಾ ರೂ. 100 / - ಚಂದಾಹಣವನ್ನು
ಸಂಪಾದಕರು, ಕರ್ನಾಟಕ ಸ್ಕೌಟ್ ಮತ್ತು ಗೈಡ್ ಮಾಸಪತ್ರಿಕೆ
ರಾಜ್ಯ ಕೇಂದ್ರ ಕಛೇರಿ, ಶಾಂತಿಗೃಹ # 39
ಅರಮನೆ ರಸ್ತೆ, ಬೆಂಗಳೂರು-560 001
ಇಲ್ಲಿಗೆ ಕಳುಹಿಸಲು ಕೋರಿದೆ.
ದೂ: 080-2226 0017, 2226 7470

ನಮ್ಮ ಸಂಸ್ಥೆಯ ವೆಬ್‌ಸೈಟ್:
www.bsgkarnataka.org

ನಮ್ಮ ಸಂಸ್ಥೆಯ ಫೇಸ್‌ಬುಕ್:
The Bharat Scouts-Guides Karnataka








# ರಾಜ್ಯ ಮುಖ್ಯ ಆಯುಕ್ತರ ನುಡಿ

ಪ್ರಿಯ ಓದುಗ ಬಂಧುಗಳೇ,

ಸಸ್ನೇಹ ನಮಸ್ಕಾರಗಳು



ಮನಸ್ಸು ಭಾರವಾಗಿದೆ. ನಮ್ಮ ನಡುವೆ ಸದಾ ಚೈತನ್ಯದ ಚಿಲುಮೆಯಾಗಿದ್ದ ನಮ್ಮ ಸಂಘಟನೆಯ ಹಿರಿಯ ನಾಯಕಿ ಶ್ರೀಮತಿ ಸರೋಜ ವಿ. ನಾಯ್ಡು ಅವರು ನಮ್ಮನಗಲಿದ್ದಾರೆ. ಅವರ ನಿಧನವು ಒಂದು ರೀತಿಯ ಶೂನ್ಯವನ್ನು ಸೃಷ್ಟಿಸಿದೆ. ಅವರು ನಮ್ಮ ಸಂಸ್ಥೆಯ ಉಪಾಧ್ಯಕ್ಷರಾಗಿದ್ದರು. ನಮ್ಮ ಚಟುವಟಿಕೆಗಳನ್ನು ಬೆಂಬಲಿಸಿ, ಅಗತ್ಯಗಳನ್ನು ಗಮನಿಸಿ ಸಹಾಯ ಮಾಡಿದ್ದಾರೆ. ತೀವ್ರ ಅನಾರೋಗ್ಯವಿದ್ದರೂ ಸೆಪ್ಟೆಂಬರ್ 10ರಂದು ದೊಡ್ಡಬಳ್ಳಾಪುರದಲ್ಲಿ ನಡೆದ ನಮ್ಮ 99ನೇ ವಾರ್ಷಿಕ ಸಭೆಗೆ ಹಾಜರಾಗಿದ್ದರು. ಸ್ಕೌಟ್ಸ್ ಚಳವಳಿಯ ಬಗ್ಗೆ ಅವರಿಗಿದ್ದ ನಂಬಿಕೆ ಮತ್ತು ಬದ್ಧತೆಗಳನ್ನು ಇದು ಪ್ರತಿಬಿಂಬಿಸುತ್ತದೆ. ವ್ಯಕ್ತಿಗಿಂತಲೂ ಸಮಾಜವು ಮುಖ್ಯ ಎಂಬುದನ್ನು ಶ್ರೀಮತಿ ಸರೋಜ ನಾಯ್ಡು ತಮ್ಮ ಬದುಕಿನಲ್ಲಿ ತೋರಿಸಿದ್ದಾರೆ.

9ನೇ ಆಗಸ್ಟ್ 1927ರಲ್ಲಿ ಮೈಸೂರಿನಲ್ಲಿ ಜನಿಸಿದ ಶ್ರೀಮತಿ ಸರೋಜ ಅವರು ಬನಾರಸ್ ಹಿಂದೂ ವಿಶ್ವವಿದ್ಯಾನಿಲಯದಲ್ಲಿ ಹಿಂದಿಯಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದರು. ಅದರ ಜೊತೆಗೆ ಕನ್ನಡ, ಇಂಗ್ಲೀಷ್, ಸಂಸ್ಕೃತ ಮತ್ತು ಮರಾಠಿ ಭಾಷೆಗಳನ್ನು ಚನ್ನಾಗಿ ಬಲ್ಲವರಾಗಿದ್ದರು. ರಷ್ಯನ್, ಫ್ರೆಂಚ್ ಭಾಷೆಗಳಲ್ಲಿ ವಿವಿಧ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದರು. ಹಿಂದಿ ವಿಷಯದ ಜನಪ್ರಿಯ ಪ್ರಾಧ್ಯಾಪಕರಾಗಿದ್ದರು. ಡಾ॥ ವೆಂಕಟರಮಣ ನಾಯ್ಡು ಅವರನ್ನು ಮದುವೆಯಾಗಿ ಸುಮಾರು 35 ವರ್ಷಗಳ ಕಾಲ ಅಮೇರಿಕಾದಲ್ಲಿ ವಾಸವಾಗಿದ್ದರೂ ಅವರ ತುಡಿತ ಭಾರತದ ಜನ-ಮನವಾಗಿತ್ತು. ಅಮೇರಿಕೆಯಲ್ಲಿಯೂ ಸಾರ್ವಜನಿಕ ಕ್ಷೇತ್ರಗಳಲ್ಲಿ ತೊಡಗಿಸಿಕೊಂಡಿದ್ದ ಶ್ರೀಮತಿ ಸರೋಜ ನಾಯ್ಡುರವರು 1998ರಲ್ಲಿ ಭಾರತಕ್ಕೆ ಹಿಂದಿರುಗಿದರು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲದೇ ಲಯನ್ಸ್ ಸಂಸ್ಥೆ, ರೆಡ್ ಕ್ರಾಸ್, ಯೋಗಿನಾರಾಯಣ ಎಜುಕೇಷನ್ ಟ್ರಸ್ಟ್, ಯುಎಸ್ಎ ಕನ್ನಡ ಕೂಟ, ಇಸ್ಕಾನ್ ಮುಂತಾದ ಹಲವಾರು ಸಂಸ್ಥೆಗಳೊಂದಿಗೆ ಒಡನಾಟ ಹೊಂದಿದ್ದರು. ಕಳೆದ 20 ವರ್ಷಗಳಿಂದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸಮೀಪದ ಒಡನಾಟ ಹೊಂದಿದ್ದ ಶ್ರೀಮತಿ ಸರೋಜ ವಿ. ನಾಯ್ಡುರವರ ಕಾಣಿಕೆಯು ನಮ್ಮ ಚಳವಳಿಗೆ ಅಮೂಲ್ಯವಾದುದು. ಅವರು ನಡಸಿದ ಚಟುವಟಿಕೆಗಳ ಮೂಲಕ ನಮ್ಮೊಡನೆ ಸದಾ ಇರುತ್ತಾರೆ ಎಂದು ನಾನು ಭಾವಿಸುತ್ತೇನೆ. ವೈಯಕ್ತಿಕವಾಗಿ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ಪರವಾಗಿ ಶ್ರದ್ಧಾಂಜಲಿಗಳನ್ನು ಅರ್ಪಿಸುತ್ತೇನೆ. ಅವರ ನಿಧನದ ದು:ಖವನ್ನು ಸಹಿಸುವ ಶಕ್ತಿಯನ್ನು ದೇವರು ಸರೋಜ ವಿ. ನಾಯ್ಡುರವರ ಕುಟುಂಬ ವರ್ಗದವರಿಗೆ ನೀಡಲಿ ಎಂದು ಪ್ರಾರ್ಥಿಸುತ್ತೇನೆ.

ಈ ತಿಂಗಳ 10ರಂದು ನಮ್ಮ ಸಂಸ್ಥೆಯ 99ನೆಯ ರಾಜ್ಯ ಪರಿಷತ್ ಸಭೆ ಡಾ॥ ಆನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್ ರಾಜ್ಯ ತರಬೇತಿ ಕೇಂದ್ರ, ದೊಡ್ಡಬಳ್ಳಾಪುರದಲ್ಲಿ ನಡೆಯಿತು. ಕಳೆದ ಒಂದು ವರ್ಷದ ಚಟುವಟಿಕೆಗಳ ವರದಿ ಮತ್ತು ಲೆಕ್ಕ-ಪತ್ರಗಳನ್ನು ಸಭೆಯಲ್ಲಿ ಮಂಡಿಸಲಾಯಿತು. ಸಭೆಯನ್ನು ಬಹಳ ಶಿಸ್ತಿನಿಂದ ಸಂಘಟಿಸಲಾಗಿತ್ತು. ಎಲ್ಲಾ

3 ಜಿಲ್ಲೆಗಳಿಂದ ಪ್ರತಿನಿಧಿಗಳು ಹಾಜರಿದ್ದು, ಪರಿಷತ್ತಿನ ಸಭೆಯಲ್ಲಿ ಕ್ರಿಯಾಶೀಲವಾಗಿ ಭಾಗವಹಿಸಿದ್ದು ನನಗೆ ಸಂತೋಷವನ್ನುಂಟುಮಾಡಿದೆ. ಜಿಲ್ಲೆ, ತಾಲ್ಲೂಕು ಮತ್ತು ಸ್ಥಳೀಯ ಘಟಕಗಳಲ್ಲಿಯೂ ಈ ಉತ್ಸಾಹವು ತಗ್ಗದೆ ನಮ್ಮ ಸಮಗ್ರ ಚಟುವಟಿಕೆಗಳು ನಡೆಯಬೇಕು, ಆಗಲೇ ಸಂಸ್ಥೆಯ ಉದ್ದೇಶ ಸಾರ್ಥಕವಾಗುತ್ತದೆ.

2017–22ರ ಅವಧಿಗೆ ಪದಾಧಿಕಾರಿಗಳನ್ನು ಪರಿಷತ್ತು ಆಯ್ಕೆ ಮಾಡಿತು. ಹಲವಾರು ಸ್ಥಾನಗಳಿಗೆ ಅವಿರೋಧವಾದ ಆಯ್ಕೆಯಾಗಿದೆ. ಎರಡು ಸ್ಥಾನಗಳಿಗೆ ಚುನಾವಣೆಯು ನಡೆಯಿತು. ಪ್ರಜಾಸತಾತ್ಮಕವಾದ ಈ ಪ್ರಕ್ರಿಯೆ ಸ್ಕೌಟ್ ಚಳವಳಿಯ ಜೀವಾಳವಾಗಿದೆ. ಚುನಾವಣೆಯಲ್ಲಿ ಗೆದ್ದು ಜವಾಬ್ದಾರಿಗಳನ್ನು ವಹಿಸಿಕೊಂಡಿರುವ ಎಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ನಾಯಕ–ನಾಯಕಿಯರುಗಳಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಈ ಚುನಾಯಿತ ಸ್ಥಾನಗಳು ಅಲಂಕಾರಿಕವಲ್ಲ. ನಿಮ್ಮ ಕಾರ್ಯಕೌಶಲ್ಯ ಮತ್ತು ಕಾರ್ಯಕ್ಷಮತೆಯ ಮೇಲೆ ಸಂಸ್ಥೆಯ ಚಟುವಟಿಕೆಗಳು ನಿಂತಿವೆ. ನಿರೀಕ್ಷೆಗಳು ಬಹಳಷ್ಟಿವೆ. ನಾವೆಲ್ಲರೂ ಒಗ್ಗಟ್ಟಿನಿಂದ ಚಳವಳಿಯನ್ನು ಬೆಳೆಸಬೇಕಿದೆ. ಸರ್ಕಾರ, ಸಾರ್ವಜನಿಕರು ಮತ್ತು ಮಕ್ಕಳು ನಮ್ಮನ್ನು ಗಮನಿಸುತ್ತಿದ್ದಾರೆ ಎಂಬುದನ್ನು ಮರೆಯುವಂತಿಲ್ಲ.

ಕಳೆದ ಮೂರು ವರ್ಷಗಳಿಂದ ನಾನು  ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತನಾಗಿ ಕೆಲಸ ಮಾಡಿದ್ದೇನೆ. ಮುಂದಿನ 2017–22ರ ಅವಧಿಗೂ ನನ್ನನ್ನು ಅವಿರೋಧವಾಗಿ ಮುಖ್ಯ ಆಯುಕ್ತನನ್ನಾಗಿ ಆಯ್ಕೆಮಾಡಿದ್ದೀರಿ. ನಿಮ್ಮೆಲ್ಲರ ವಿಶ್ವಾಸಕ್ಕೆ ನಾನು ಋಣಿಯಾಗಿದ್ದೇನೆ. ಕಳೆದ ಮೂರು ವರ್ಷಗಳ ಅವಧಿಯು ನನಗೆ ಬಹಳ ತೃಪ್ತಿಯನ್ನು ತಂದುಕೊಟ್ಟಿದೆ. ಅದರಲ್ಲೂ ಭವಿಷ್ಯ ಭಾರತದ ನಿರ್ಮಾಪಕರಾದ ಮಕ್ಕಳ ಸರ್ವತೋಮುಖ ಬೆಳವಣಿಗೆಗೆ ಶ್ರಮಿಸಿದ್ದು ಸಂತೋಷವನ್ನುಂಟುಮಾಡಿದೆ. ಈ ಕೆಲಸದಲ್ಲಿ ಕರ್ನಾಟಕ ರಾಜ್ಯ ಸರ್ಕಾರ ಮತ್ತು ಸಾರ್ವಜನಿಕ ಶಿಕ್ಷಣ ಇಲಾಖೆ, ಕಾಲೇಜು ಶಿಕ್ಷಣ ಇಲಾಖೆ ಮತ್ತಿತರ ಸರ್ಕಾರದ ಸಂಸ್ಥೆಗಳು ನನ್ನೊಡನೆ ಹೃತ್ಪೂರ್ವಕವಾಗಿ ಕೈಜೋಡಿಸಿವೆ. ಬಿ.ಬಿ.ಎಂ.ಪಿ., ಹಲವು ವಿಶ್ವವಿದ್ಯಾನಿಲಯಗಳು ಸ್ಕೌಟ್ಸ್ ಚಳವಳಿಯ ವಿಸ್ತರಣೆಗೆ ಅವಕಾಶ ಮಾಡಿಕೊಟ್ಟಿದೆ.  ಕಳೆದ ಮೂರು ವರ್ಷಗಳಲ್ಲಿ ರಾಜ್ಯ, ಜಿಲ್ಲೆ ಹಾಗೂ ಸ್ಥಳೀಯ ಮಟ್ಟದಲ್ಲಿ, ದಳ ನಾಯಕ–ನಾಯಕಿಯರು ಉತ್ತಮ ಸಹಕಾರ ನಿಡಿದ್ದಾರೆ ಹಾಗಾಗಿಯೇ ನಮ್ಮ ಕಾರ್ಯಚಟುವಟಿಕೆಗಳಲ್ಲಿ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಲ್ಲಿ ಸಾಕಷ್ಟು ಪ್ರಗತಿ ಸಾಧಿಸಲು ಸಾಧ್ಯವಾಯಿತು. 27ನೇಯ ರಾಜ್ಯ ಜಾಂಬೋರೇಟ್ ಮತ್ತು 17ನೆಯ ರಾಷ್ಟ್ರೀಯ ಜಾಂಬೂರಿಯು ನಮ್ಮ ಸಾಮರ್ಥ್ಯವನ್ನು ಸಕಾರಾತ್ಮಕವಾಗಿ ರಾಷ್ಟ್ರಮಟ್ಟದಲ್ಲಿ ಅಭಿವ್ಯಕ್ತಿಗೊಳಿಸಿದೆ. ನಿಮ್ಮ ಸಹಕಾರಗಳಿಗೆ ನಾನು ಕೃತಜ್ಞನಾಗಿದ್ದೇನೆ. ಇದೇ ಸಂದರ್ಭದಲ್ಲಿ ದೊಡ್ಡಬಳ್ಳಾಪುರ ತರಬೇತಿ ಕೇಂದ್ರದಲ್ಲಿ ಸಸಿಗಳನ್ನು ನೆಡಲಾಯಿತು.



ರಾಜ್ಯ ಸರ್ಕಾರದಿಂದ ಪ್ರತಿವರ್ಷ ಅನುದಾನವು ಹೆಚ್ಚುತ್ತಿದೆ. ಅಂತೆಯೇ ನಮ್ಮ ಗಣತಿಯನ್ನು ಹೆಚ್ಚು ಮಾಡಬೇಕಾದ ಅವಶ್ಯಕತೆ ಇದೆ. ಮುಂದಿನ ದಿನಗಳಲ್ಲಿ ಗಣತಿಯು 10 ಲಕ್ಷ ಮುಟ್ಟಬೇಕು ಎಂಬುದು ನನ್ನ ಅಭಿಲಾಷೆ. ಕರ್ನಾಟಕ ದರ್ಶನದಂತಹ ಹೊಸ ಕಾರ್ಯಕ್ರಮವೊಂದನ್ನು ನಾವು ಸರ್ಕಾರದ ಸಹಾಯದಿಂದ ಜಾರಿಗೆ ತರಲು ಸಾಧ್ಯವಾಯಿತು. ದೊರೆಯುತ್ತಿರುವ ಅವಕಾಶಗಳ ಸಂಪೂರ್ಣ ಪ್ರಯೋಜನವನ್ನು ನಾವು ಪಡೆದುಕೊಂಡರೆ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ವಿಸ್ತರಣೆಗೆ ವಿಪುಲ ಹಾದಿಗಳು ತೆರೆದುಕೊಳ್ಳುತ್ತವೆ.

ಮೂಲತರಬೇತಿ ಶಿಬಿರಗಳನ್ನು ಹಲವಾರು ಜಿಲ್ಲಾ ಸಂಸ್ಥೆಗಳ ಸಂಘಟಿಸಿಲ್ಲ. ಈ ಬಗ್ಗೆ ತೀವ್ರ ಕಾಳಜಿಯನ್ನು ಕಳೆದ ಸಂಚಿಕೆಯಲ್ಲಿಯೇ ನಾನು ವ್ಯಕ್ತಪಡಿಸಿದ್ದೇನೆ. ಸ್ಕೌಟ್, ಗೈಡ್, ಕಬ್, ಬುಲ್‌ಬುಲ್ ಘಟಕಗಳ ನಾಯಕರ ಮೂಲತರಬೇತಿಯು "ಕಟ್ಟಡದ ಅಡಿಪಾಯ"ವಿದ್ದಂತೆ. ಶಿಬಿರಗಳನ್ನು ಇನ್ನೂ ನಡೆಸದಿರುವ ಜಿಲ್ಲೆಗಳು ತಕ್ಷಣ ಕಾರ್ಯಪ್ರವೃತ್ತರಾಗಬೇಕೆಂದು ನಾನು ಆಗ್ರಹಿಸುತ್ತೇನೆ.

ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿಂದ ವಿಶ್ವವಿದ್ಯಾಲಯವೊಂದನ್ನು ಆರಂಭಿಸಬೇಕೆಂಬುದು ನನ್ನ ಬಹುದಿನಗಳ ಆಶಯ. ಈ ಹಿನ್ನೆಲೆಯಲ್ಲಿ ಸಾಕಷ್ಟು ಕೆಲಸಗಳು ಆಗಿವೆ. ಮುಂದಿನ ದಿನಗಳಲ್ಲಿ ಈ ಆಶಯವು ಸಾಕಾರವಾಗಲಿ ಎಂಬುದು ನನ್ನ ಮನದಾಳದ ಬಯಕೆ.

28ನೇಯ ಕರ್ನಾಟಕ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬೋರೇಟನ್ನು ಮಂಗಳೂರಿನಲ್ಲಿ ಡಿಸೆಂಬರ್ 2017 - ಜನವರಿ 2018ರಲ್ಲಿ ಸಂಘಟಿಸಲಾಗುವುದು. ಇದಕ್ಕಾಗಿ ಸಿದ್ಧತಾ ಕಾರ್ಯಗಳು ಈಗಾಗಲೇ ಆರಂಭವಾಗಿದೆ. ಸಂಬಂಧಿಸಿದ ಸುತ್ತೋಲೆಯನ್ನು ಬಿಡುಗಡೆ ಮಾಡಲಾಗಿದೆ. ಜಾಂಬೋರೇಟ್ ಯಶಸ್ವಿಗೊಳಿಸಲು ನಿಮ್ಮೆಲ್ಲರ ಸಕಾರಾತ್ಮಕ ಪ್ರತಿಕ್ರಿಯೆಯನ್ನು ನಿರೀಕ್ಷಿಸುತ್ತೇನೆ.

ರಾಜ್ಯದಲ್ಲಿ ಉತ್ತಮ ಮಳೆಯಾಗಿರುವುದು ಒಳ್ಳೆಯ ಸೂಚನೆ. ನಾನು ಪುನ:-ಪುನ: ಸೂಚಿಸುವಂತೆ ನೀರಿನ ಕೃಷಿ ಮತ್ತು ಸಂರಕ್ಷಣೆ ಇಂದಿನ ಅಗತ್ಯವಾಗಿದೆ. ನಿರಂತರವಾಗಿ ಈ ಜಾಗೃತಿಯನ್ನು, ಚಳವಳಿಯನ್ನು ನಾವು ಮುಂದುವರೆಸೋಣ.



ನಾಡ ಹಬ್ಬ ದಸರಾ ಆರಂಭವಾಗಿದೆ. ನಮ್ಮ ಹೆಮ್ಮೆಯ ಕವಿ ಶ್ರೀ ನಿಸಾರ್ ಅಹಮ್ಮದ್‌ಅವರು ದಸರಾ ಹಬ್ಬವನ್ನು ಉದ್ಘಾಟಿಸಿರುವುದು ಬಹಳ ಸಂತೋಷದ ವಿಷಯವಾಗಿದೆ. ಮೈಸೂರು ಅರಸರು ನಡೆಸಿಕೊಂಡು ಬಂದ ದಸರಾ ಈಗ ಜನರ ನಾಡಹಬ್ಬವಾಗಿ ರೂಪುಗೊಂಡಿದೆ. ನಾವೆಲ್ಲರೂ ಉತ್ಸಾಹದಿಂದ ಭಾಗವಹಿಸೋಣ. ಮುಂದಿನ ತಿಂಗಳಲ್ಲಿ ದೀಪಾವಳಿ ಹಬ್ಬವು ಬರಲಿದೆ. ಮಕ್ಕಳಿಗೆ ಬಹಳ ಆನಂದದಾಯಕವಾದ ಸಂದರ್ಭ. ಪರಿಸರಕ್ಕೆ ಹಾನಿಯಾಗದಂತೆ ನಾವು ದೀಪಾವಳಿಯನ್ನು ಆಚರಿಸೋಣ. ಸ್ಕೌಟ್ಸ್ ಮತ್ತು ಗೈಡ್ಸ್‌ಗಳಾದ ನಮಗೆ ಹೆಚ್ಚಿನ ಜವಾಬ್ದಾರಿ ಇದೆ. ಸಂತೋಷವನ್ನು ಹಂಚಿಕೊಳ್ಳುವುದರ ಜೊತೆಗೆ ಪರಿಸರ ಜಾಗೃತಿಯುನ್ನು ಉಂಟುಮಾಡಬೇಕು. ಪಟಾಕಿಯು ಅಪಾಯಗಳನ್ನು ತಪ್ಪಿಸಬೇಕು. ನಿಮಗೆಲ್ಲರಿಗೂ ದೀಪಾವಳಿಯ ಹಾರ್ದಿಕ ಶುಭಾಶಯಗಳು.





ಅಕ್ಟೋಬರ್ 2, ನಮಗೆ ಬಹಳ ಮುಖ್ಯವಾದ ದಿನ. ರಾಷ್ಟ್ರಪಿತ ಮಹಾತ್ಮಗಾಂಧಿಯವರ ಜನ್ಮ ದಿನ. ಗಾಂಧೀಜಿ ನುಡಿದಂತೆ ನಡೆದವರು. ದೇಶದ ಸ್ವಾತಂತ್ರ್ಯಕ್ಕಾಗಿ ತಮ್ಮನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡವರು. ವಿಶ್ವದಲ್ಲಿಯೇ ವಿನೂತನವಾದ ಅಹಿಂಸಾ ಹೋರಾಟದ ಮೂಲಕ ಸ್ವಾತಂತ್ರ್ಯ ಚಳವಳಿಗೆ ಮೆರಗು ತಂದವರು. ಅವರ ಸತ್ಯನಿಷ್ಠೆ, ಸೇವಾ ಮನೋಭಾವ, ಎಲ್ಲರನ್ನೂ ಒಳಗೊಳ್ಳುವ ನಡೆ-ನುಡಿ ನಮಗೆಲ್ಲರಿಗೂ ಸದಾ ಅನುಕರಣೀಯ. ಇಂದು ದೇಶದಲ್ಲಿ ವಿಷಮ ವಾತಾವರಣವು ಹಬ್ಬುತ್ತಿದೆ. ದೇಶದ ಬಹುತ್ವಕ್ಕೆ ಅಪಾಯ ಉಂಟಾಗುತ್ತಿದೆ. ಇಂತಹ ಕ್ಲಿಷ್ಟ ಸಂದರ್ಭದಲ್ಲಿ ಮಹಾತ್ಮಗಾಂಧಿಯವರ ಚಿಂತನೆ-ಆದರ್ಶಗಳು ಬಹಳ ಪ್ರಸ್ತುತವಾಗುತ್ತದೆ. ನಾವೆಲ್ಲರೂ ಕೂಡಿ ಚಿಂತಿಸಬೇಕಾದ ಅವಶ್ಯಕತೆ ಇದೆ.

ಮತ್ತೊಮ್ಮೆ ನಿಮಗೆಲ್ಲರಿಗೂ ದಸರಾ-ದೀಪಾವಳಿ ಹಾಗು ಗಾಂಧಿಜಯಂತಿಯ ಹಾರ್ದಿಕ ಶುಭಾಶಯಗಳು.

**ಸ್ಕೌಟ್ಸ್ ಮತ್ತು ಗೈಡ್ಸ್ ವಂದನೆಗಳೊಂದಿಗೆ,**

ತಮ್ಮ ವಿಶ್ವಾಸಿ

ಪಿ.ಜಿ.ಆರ್. ಸಿಂಧ್ಯ

ರಾಜ್ಯ ಮುಖ್ಯ ಆಯುಕ್ತರು

# ರಾಜ್ಯ ವಾರ್ತೆಗಳು

## ಡಾ॥ ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಜರುಗಿದ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕದ 99ನೇ ರಾಜ್ಯ ಪರಿಷತ್ ಸಭೆಯ ವರದಿ



ಸೆಪ್ಟೆಂಬರ್ 10ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ 99ನೇ ರಾಜ್ಯ ಪರಿಷತ್ ಸಭೆಯು ಡಾ. ಆನಿಬೆಸೆಂಟ್ ಸ್ಕೌಟ್ಸ್ & ಗೈಡ್ಸ್ ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರದ ಕೊಂಡಜ್ಜಿ ಬಸಪ್ಪ ಸಭಾಂಗಣದಲ್ಲಿ ನೆರವೇರಿತು. ಅಧ್ಯಕ್ಷರು ಹಾಗೂ ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯ ಅವರ ಅನುಪಸ್ಥಿತಿಯಲ್ಲಿ ಹಿರಿಯ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ ರವರು ಅಧ್ಯಕ್ಷತೆ ವಹಿಸಿ ಕಾರ್ಯಕಲಾಪಗಳನ್ನು ನಡೆಸಿಕೊಟ್ಟರು. 2016–17ರ ಸಾಲಿನ ವರದಿ ಆಯವ್ಯಯ ತೀರ್ಮಾನಗಳ ಬಗ್ಗೆ ತೆಗೆದುಕೊಂಡ ಕ್ರಮಗಳನ್ನು ಮಂಡಿಸಿ ಅನುಮೋದನೆ ಪಡೆಯಲಾಯಿತು. ಹಾಗೆಯೇ 2017–18ನೇ ಸಾಲಿನ ಕಾರ್ಯಕ್ರಮಗಳು ಹಾಗು ಅಂದಾಜು ವೆಚ್ಚ ಮುಂತಾದ ವಿಷಯಗಳ ಬಗ್ಗೆ ಚರ್ಚೆ ನಡೆದು ರಾಜ್ಯ ಪರಿಷತ್‌ನ ಅನುಮೋದನೆ ಪಡೆಯಲಾಯಿತು.



ರಾಜ್ಯ ಪರಿಷತ್ ಸಭೆಯಲ್ಲಿ ಉಪಸ್ಥಿತರಿದ್ದು ವೇದಿಕೆಯಲ್ಲಿ ಆಸೀನರಾಗಿದ್ದ ಸರ್ವರನ್ನು ಶಾಲು ಹೊದಿಸಿ ಸನ್ಮಾನಿಸಿ ಮಾತನಾಡಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ರವರು ಸಭೆಯನ್ನು ಉದ್ದೇಶಿಸಿ ಮಾತನಾಡಿ ಮುಂದಿನ 5 ವರ್ಷಗಳಲ್ಲಿ ರಾಜ್ಯ ಸಂಸ್ಥೆಯಲ್ಲಿ ಕೈಗೊಳ್ಳಬಹುದಾದ ಕಾರ್ಯಕ್ರಮ, ತರಬೇತಿ, ತರಬೇತಿ ಕೇಂದ್ರಗಳ ಅಭಿವೃದ್ಧಿ ಹಾಗೂ ಜಿಲ್ಲಾ / ಸ್ಥಳೀಯ ಸಂಸ್ಥೆಗಳ ಅಭಿವೃದ್ಧಿ ಹಾಗೂ ಚಳವಳಿಯ ಬೆಳವಣಿಗೆ ಕುರಿತು ವಿವರವಾದ ಮಾಹಿತಿಯನ್ನು ನೀಡಿದರು ಹಾಗೂ ರಾಜ್ಯ ಮಟ್ಟದ ಪಾರಿತೋಷಕ ಹಾಗೂ ವಿಭಾಗ ಮಟ್ಟದ ಪ್ರಶಸ್ತಿಗಳನ್ನು ಉತ್ತಮ ಸ್ಥಾನ ಗಳಿಸಿದ ಜಿಲ್ಲೆಗಳಿಗೆ ನೀಡಿ ಅಭಿನಂದಿಸಿದರು.

ಇದೇ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರ ಮರು ಆಯ್ಕೆಯಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವವರನ್ನು ಎಲ್ಲಾ ಪದಾಧಿಕಾರಿಗಳ ಪರವಾಗಿ ಅಭಿನಂದಿಸಿ ಗೌರವಿಸಲಾಯಿತು. ಹೊಸದಾಗಿ ಆಯ್ಕೆಯಾದ ಎಲ್ಲಾ ಅಭ್ಯರ್ಥಿಗಳನ್ನು ಅಭಿನಂದಿಸಲಾಯಿತು.

**ರಾಜ್ಯಮಟ್ಟದ ಹಾಗೂ ವಿಭಾಗವಾರು ಉತ್ತಮ ಸ್ಥಾನ ಗಳಿಸಿದ ವಿವಿಧ ಜಿಲ್ಲೆಗಳ ವಿವರಗಳು ಕೆಳಕಂಡಂತಿದೆ.**

### ರಾಜ್ಯ ಮಟ್ಟದ ಪರ್ಯಾಯ ಫಲಕ ಪ್ರಶಸ್ತಿಗಳ ವಿವರಗಳು

| | | | |
|---|---|---|---|
| 1. | ಅಬ್ದುಲ್ ಗಫಾರ್ ಪರ್ಯಾಯ ಫಲಕ | ರಾಜ್ಯದ 1ನೇ ಅತ್ಯುತ್ತಮ ಜಿಲ್ಲೆ | ದಕ್ಷಿಣ ಕನ್ನಡ |
| 2. | ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಫಲಕ | ರಾಜ್ಯದ 2ನೇ ಅತ್ಯುತ್ತಮ ಜಿಲ್ಲೆ | ಉಡುಪಿ |
| 3. | ಮೇಜರ್ ವೈ.ವಿ.ಕೆ.ಮೂರ್ತಿ ಪರ್ಯಾಯ ಫಲಕ | ರಾಜ್ಯದ 3ನೇ ಅತ್ಯುತ್ತಮ ಜಿಲ್ಲೆ | ದಾವಣಗೆರೆ |

## ವಿಭಾಗ ಮಟ್ಟದ ಪರ್ಯಾಯ ಫಲಕ ಪ್ರಶಸ್ತಿಗಳ ವಿವರಗಳು

### ವಿ.ಪಿ. ದೀನದಯಾಳು ನಾಯ್ಡು ಪರ್ಯಾಯ ಫಲಕ – ಬೆಂಗಳೂರು ವಿಭಾಗ


ಪ್ರಥಮ ಸ್ಥಾನ : ಕೋಲಾರ


ದ್ವಿತೀಯ ಸ್ಥಾನ : ಬೆಂಗಳೂರು ದಕ್ಷಿಣ


ತೃತೀಯ ಸ್ಥಾನ : ಶಿವಮೊಗ್ಗ

### ಜೆ.ಬಿ. ಮಲ್ಲಾರಾಧ್ಯ ಪರ್ಯಾಯ ಫಲಕ – ಮೈಸೂರು ವಿಭಾಗ


ಪ್ರಥಮ ಸ್ಥಾನ : ಹಾಸನ


ದ್ವಿತೀಯ ಸ್ಥಾನ : ಮೈಸೂರು


ತೃತೀಯ ಸ್ಥಾನ : ಚಾಮರಾಜನಗರ

### ಕೊಂಡಜ್ಜಿ ಬಸಪ್ಪ ಪರ್ಯಾಯ ಫಲಕ – ಬೆಳಗಾವಿ ವಿಭಾಗ


ಪ್ರಥಮ ಸ್ಥಾನ : ಬೆಳಗಾವಿ


ದ್ವಿತೀಯ ಸ್ಥಾನ : ಧಾರವಾಡ


ತೃತೀಯ ಸ್ಥಾನ : ಹಾವೇರಿ

### ಪ್ರೊ. ಪಿ. ಶಿವಶಂಕರ್ ಪರ್ಯಾಯ ಫಲಕ – ಕಲಬುರಗಿ ವಿಭಾಗ


ಪ್ರಥಮ ಸ್ಥಾನ : ರಾಯಚೂರು


ದ್ವಿತೀಯ ಸ್ಥಾನ : ಬಳ್ಳಾರಿ


ತೃತೀಯ ಸ್ಥಾನ : ಕಲಬುರಗಿ

ಸಭೆಯಲ್ಲಿ ಉಪಸ್ಥಿತರಿದ್ದ ರಾಜ್ಯದ ಹಿರಿಯ ಜಾನಪದ ತಜ್ಞರೂ, ಸಂಸ್ಥೆಯ ಪ್ರಕಟನಾ ಸಮಿತಿಯ ಅಧ್ಯಕ್ಷರೂ, ರಾಜ್ಯ ಸಂಸ್ಥೆಯ ಧರ್ಮದರ್ಶಿಗಳಾದ ಡಾ॥ ಗೊ.ರು.ಚನ್ನಬಸಪ್ಪರವರು ಸಭೆಯನ್ನು ಉದ್ದೇಶಿಸಿ ಮಾತನಾಡಿ ರಾಜ್ಯ ಸಂಸ್ಥೆಯ ಬೆಳವಣಿಗೆ ಮತ್ತು ಕಾರ್ಯಕ್ರಮಗಳ ಯಶಸ್ವಿಗಾಗಿ ಶ್ರಮಿಸಿದ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್.ಸಿಂಧ್ಯ ಅವರ ಕಾರ್ಯಸಾಧನೆಯನ್ನು ಪ್ರಶಂಶಿಸಿ ಮುಂದಿನ ಅವಧಿಗೂ ಚಳವಳಿಯ ಬೆಳವಣಿಗೆ ಮತ್ತು ಅಭಿವೃದ್ಧಿಗೆ ರಾಜ್ಯ ಮುಖ್ಯ ಆಯುಕ್ತರಿಗೆ ಎಲ್ಲಾ ಪದಾಧಿಕಾರಿಗಳು ಸಹಕರಿಸುವಂತೆ ಸೂಚಿಸಿ, ಹೊಸದಾಗಿ ಆಯ್ಕೆಯಾದ ಸದಸ್ಯರುಗಳಿಗೆ ಶುಭ ಹಾರೈಸಿದರು.

ಶ್ರೀ ಚಿನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿಗಳು ರಾಜ್ಯ ಪರಿಷತ್ ಸಭೆಯ ಚುನಾವಣಾ ಪ್ರಕ್ರಿಯೆಗಳು ಹಾಗೂ ಪರಿಷತ್ ಸಭೆಗೆ 5 ವರ್ಷಗಳ ಅವಧಿಗೆ ಹೊಸದಾಗಿ ಚುನಾಯಿತರಾದ ಹಾಗೂ ಅವಿರೋಧವಾಗಿ ಆಯ್ಕೆಯಾದ ಅಭ್ಯರ್ಥಿಗಳ ಫಲಿತಾಂಶ ಪಟ್ಟಿಯನ್ನು ಪ್ರಕಟಿಸಿದರು. ಈ ಕೆಳಕಂಡವರುಗಳು ಅಧ್ಯಕ್ಷರು, ಉಪಾಧ್ಯಕ್ಷರುಗಳು, ರಾಜ್ಯ ಮುಖ್ಯ ಆಯುಕ್ತರ ಹುದ್ದೆಗೆ ಹಾಗೂ ರಾಜ್ಯ ಕಾರ್ಯಕಾರಿ ಸಮಿತಿ ಮತ್ತು ಹಣಕಾಸು ಸಮಿತಿಗಳಿಗೆ ಆಯ್ಕೆಯಾಗಿರುತ್ತಾರೆ.

| ಕ್ರಸಂ. | ಶ್ರೀಯುತ / ಶ್ರೀಮತಿಯರುಗಳ ವಿವರ | ಪದನಾಮ |
|---|---|---|
| 1. | **ಶ್ರೀ ಸಿದ್ದರಾಮಯ್ಯ** | **ಅಧ್ಯಕ್ಷರು**<br>ಸನ್ಮಾನ್ಯ ಮುಖ್ಯಮಂತ್ರಿಗಳು, ಕರ್ನಾಟಕ ಸರ್ಕಾರ |
| 2. | **ಶ್ರೀ ಬಸವರಾಜ ರಾಯರೆಡ್ಡಿ** | **ಉಪಾಧ್ಯಕ್ಷರು**<br>ಸನ್ಮಾನ್ಯ ಉನ್ನತ ಶಿಕ್ಷಣ ಸಚಿವರು, ಕರ್ನಾಟಕ ಸರ್ಕಾರ |
| | **ಶ್ರೀ ತನ್ವೀರ್ ಸೇಠ್** | **ಉಪಾಧ್ಯಕ್ಷರು**<br>ಸನ್ಮಾನ್ಯ ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ,<br>ವಕ್ಫ್ ಸಚಿವರು, ಕರ್ನಾಟಕ ಸರ್ಕಾರ |
| | **ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ** | **ಉಪಾಧ್ಯಕ್ಷರು**<br>ಮಾಜಿ ರಾಜ್ಯ ಮುಖ್ಯ ಆಯುಕ್ತರು |
| | **ಶ್ರೀಮತಿ ಕೆ. ರತ್ನಪ್ರಭಾ** | **ಉಪಾಧ್ಯಕ್ಷರು**<br>ಅಪರ ಮುಖ್ಯ ಕಾರ್ಯದರ್ಶಿಗಳು, ಕರ್ನಾಟಕ ಸರ್ಕಾರ |
| | **ಶ್ರೀಮತಿ ತೇಜಸ್ವಿನಿ ಅನಂತ್‌ಕುಮಾರ್** | **ಉಪಾಧ್ಯಕ್ಷರು**<br>ಅಧ್ಯಕ್ಷರು, ಅದಮ್ಯ ಚೇತನ, ಬೆಂಗಳೂರು |
| | **ಶ್ರೀಮತಿ ಭಾರತಿ ಚಂದ್ರಶೇಖರ್, ಶಿವಮೊಗ್ಗ** | **ಉಪಾಧ್ಯಕ್ಷರು** |
| 3. | **ಶ್ರೀ ಪಿ.ಜಿ.ಆರ್. ಸಿಂಧ್ಯ** | **ರಾಜ್ಯ ಮುಖ್ಯ ಆಯುಕ್ತರು**<br>ಮಾನ್ಯ ಗೃಹ, ಕೈಗಾರಿಕೆ ಹಾಗೂ ಹಣಕಾಸು<br>ಇಲಾಖೆಗಳ ಮಾಜಿ ಸಚಿವರು, ಕರ್ನಾಟಕ ಸರ್ಕಾರ |
| 4. | **ರಾಜ್ಯ ಕಾರ್ಯಕಾರಿ ಸಮಿತಿ ಸದಸ್ಯರುಗಳು** | |
| | ಪಿ. ವಿಶ್ವನಾಥ್ | ಜಿಲ್ಲಾ ಮುಖ್ಯ ಆಯುಕ್ತರು, ಮೈಸೂರು |
| | ಡಾ॥ ಮಾಧುರಿ ದೇವಧರ್ | ಜಿಲ್ಲಾ ಮುಖ್ಯ ಆಯುಕ್ತರು, ಹಾವೇರಿ |
| | ಶ್ರೀ ಬಿ.ಆರ್. ವೇಣುಗೋಪಾಲಾ ಕೃಷ್ಣ | ಜಿಲ್ಲಾ ಆಯುಕ್ತರು (ಸ್ಕೌಟ್ಸ್), ತುಮಕೂರು |
| | ಶ್ರೀ ಎ.ಪಿ. ಷಡಾಕ್ಷರಪ್ಪ | ಜಿಲ್ಲಾ ಆಯುಕ್ತರು (ಸ್ಕೌಟ್ಸ್), ದಾವಣಗೆರೆ |
| | ಶ್ರೀಮತಿ ಕೆ. ಅಲಿಯಾ ಖಾನಂ | ಜಿಲ್ಲಾ ಆಯುಕ್ತರು (ಗೈಡ್ಸ್), ರಾಯಚೂರು |
| | ಶ್ರೀಮತಿ ಉಮಾ ನಾಗೇಶ್ | ಜಿಲ್ಲಾ ಆಯುಕ್ತರು (ಗೈಡ್ಸ್), ಬೆಂಗಳೂರು ದಕ್ಷಿಣ |
| | ಡಾ॥ ಕೆ.ಬಿ. ಗುರುಮೂರ್ತಿ | ಆಜೀವ ಸದಸ್ಯರು, ಮೈಸೂರು |
| | ಡಾ॥ ಎಂ.ಜಿ. ಶಶಿಧರ್ | ಸಾಮಾನ್ಯ ಸದಸ್ಯರು, ದಾವಣಗೆರೆ |
| | ಶ್ರೀ ಕೆ.ಜಿ. ಗೋಪಾಲ ಕೃಷ್ಣ | ತರಬೇತಿ ನಾಯಕರು (ಸ್ಕೌಟ್ಸ್), ಮೈಸೂರು |

| | |
|---|---|
| ಶ್ರೀಮತಿ ಅರುಣಮಾಲಾ | ತರಬೇತಿ ನಾಯಕರು (ಗೈಡ್ಸ್), ಶಿವಮೊಗ್ಗ |
| ಶ್ರೀ ವಿ.ಎಂ. ರಾಮಚಂದ್ರ | ಸ್ಕೌಟ್ ಮಾಸ್ಟರ್, ಚಾಮರಾಜನಗರ |
| ಶ್ರೀ ಆರ್.ಡಿ. ಹೊಂಬಾರಡಿ | ಸ್ಕೌಟ್ ಮಾಸ್ಟರ್, ಹಾವೇರಿ |
| ಶ್ರೀಮತಿ ಜಯಶೀಲ | ಗೈಡ್ ಕ್ಯಾಪ್ಟನ್, ಬೀದರ್ |
| ಶ್ರೀಮತಿ ಎಲ್.ಎಸ್. ಬಹದ್ದೂರಿ | ಗೈಡ್ ಕ್ಯಾಪ್ಟನ್, ಬೆಳಗಾವಿ |

5. **ಹಣಕಾಸು ಸಮಿತಿ ಸದಸ್ಯರು**

| | |
|---|---|
| ಶ್ರೀಮತಿ ಸುಮ ಎಸ್. ಗರಗ್ | ಜಿಲ್ಲಾ ಆಯುಕ್ತರು (ಗೈಡ್ಸ್), ಗದಗ |
| ಶ್ರೀಮತಿ ಸಿ.ವಿ.ಕೃಪಾ ವಿಜಯ್ | ಆಜೀವ ಸದಸ್ಯರು, ಬೆಂಗಳೂರು |
| ಶ್ರೀ ಎಂ.ಕೆ.ಖಾನ್ | ಜಿಲ್ಲಾ ಮುಖ್ಯ ಆಯುಕ್ತರು, ಬೆಂಗಳೂರು ದಕ್ಷಿಣ |
| ಶ್ರೀ ಬಿ.ಷರಾಫ್ ಮಾದಪ್ಪ | ಜಿಲ್ಲಾ ಆಯುಕ್ತರು (ಸ್ಕೌಟ್ಸ್),ಚಾಮರಾಜನಗರ |

ಸಭೆಯಲ್ಲಿ ಉಪಾಧ್ಯಕ್ಷರಾದ ಶ್ರೀ ಕೊಂಡಜ್ಜಿ ಬಿ. ಷಣ್ಮುಖಪ್ಪ, ಶ್ರೀಮತಿ ಸರೋಜ ವಿ. ನಾಯ್ಡು, ಶ್ರೀ ಟಿ.ಎಸ್.ಲೂಕಾಸ್, ಶ್ರೀಮತಿ ಭಾರತಿ ಚಂದ್ರಶೇಖರ್, ಶ್ರೀ ಎಂ.ಎ.ಖಾಲಿದ್, ರಾಜ್ಯ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಗೀತಾನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್), ಶ್ರೀ ಚೆನ್ನಸ್ವಾಮಿ ರೆಡ್ಡಿ, ರಾಜ್ಯ ಕಾರ್ಯದರ್ಶಿ, ಶ್ರೀ ಪ್ರಭುದೇವ ಜೆ. ಚಿಗಟೇರಿ, ರಾಜ್ಯ ಕೋಶಾಧಿಕಾರಿಗಳು ಉಪಸ್ಥಿತರಿದ್ದರು. ಶ್ರೀಮತಿ ಗೀತಾ ನಟರಾಜ್, ರಾಜ್ಯ ಆಯುಕ್ತರು (ಗೈಡ್ಸ್) ರವರು ಸ್ವಾಗತಿಸಿದರು. ಶ್ರೀ ಎಂ.ಪ್ರಭಾಕರ್‌ಭಟ್, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್ಸ್)ರವರು ವಂದಿಸಿದರು.



## ಅಂತರರಾಷ್ಟ್ರೀಯ ಫ್ರೆಂಡ್‌ಶಿಪ್ ಜಾಂಬೂರಿ, ಶ್ರೀಲಂಕಾ

ಆಗಸ್ಟ್ 2 ರಿಂದ 9 ರ ವರೆಗೆ ನಡೆದ ಅಂತರರಾಷ್ಟ್ರೀಯ ಫ್ರೆಂಡ್‌ಶಿಪ್ ಜಾಂಬೂರಿಯಲ್ಲಿ ಮಂಗಳೂರಿನ ಶಾರದಾ ವಿದ್ಯಾಲಯದ ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು. ಮಂಗಳೂರಿನ ಕೊಡಿಯಾಲಬೈಲಿನಲ್ಲಿರುವ ಶಾರದಾ ವಿದ್ಯಾಲಯ ವಿದ್ಯಾ ಸಂಸ್ಥೆಯಿಂದ 4 ಸ್ಕೌಟ್ಸ್, 5 ಗೈಡ್ಸ್‌ಗಳು ಹಾಗೂ ಭಾರತದ ಕಂಟಿಂಜಂಟ್ ನಾಯಕನಾಗಿ ಸ್ಕೌಟ್ ಮಾಸ್ಟರ್ ಶ್ರೀ ದಿನೇಶ್ ಕೆ. ಇವರು ಆಯ್ಕೆಗೊಂಡಿದ್ದರು. ಈ ಶಿಬಿರದಲ್ಲಿ 12 ರಾಷ್ಟ್ರಗಳ 1000 ಕ್ಕಿಂತ ಹೆಚ್ಚು ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು ಹಾಗೂ ಈ ಶಿಬಿರದಲ್ಲಿ ಸಾಹಸಮಯ ಚಟುವಟಿಕೆಗಳು ಪ್ರಮುಖವಾಗಿದ್ದವು.

ಪ್ರವಾಹದ ಸಂದರ್ಭದಲ್ಲಿ ನಡೆಸುವ ರಕ್ಷಣಾ ಕಾರ್ಯದ ಕುರಿತು ಶ್ರೀಲಂಕಾದ ನೌಕಾಪಡೆಯ ಅಧಿಕಾರಿಗಳು ಪ್ರಾತ್ಯಕ್ಷಿಕವಾಗಿ ತಿಳಿಸಿಕೊಟ್ಟಿದ್ದಲ್ಲದೆ ಖುದ್ದಾಗಿ ಮಕ್ಕಳಿಂದಲೇ ರಕ್ಷಣಾ ಕಾರ್ಯಗಳ ಅಣುಕು ಪ್ರದರ್ಶನವನ್ನು ಮಾಡಿಸುವುದರ ಮೂಲಕ ಅರಿವು ಮೂಡಿಸಿದರು. ಅದೇ ರೀತಿ ವಾಯುಪಡೆಯು ಕೂಡಾ ವಿಮಾನದ ಮೂಲಕ ನಡೆಸುವ ರಕ್ಷಣಾ ಕಾರ್ಯ ಕುರಿತು ಮಾಹಿತಿಯನ್ನು ನೀಡಿದರು.

ಈ ಶಿಬಿರದಲ್ಲಿ ತಮ್ಮ ತಮ್ಮ ದೇಶದ ಸಾಂಪ್ರದಾಯಕ ದಿವನ್ನು ಆಚರಿಸಲಾಗಿ ನಮ್ಮ ಸ್ಕೌಟ್-ಗೈಡ್‌ಗಳು ಭಾರತೀಯ ಸಂಸ್ಕೃತಿಯ ಉಡುಗೆ ತೊಡುಗೆ ತೊಟ್ಟು ವಿಜ್ರಂಭಿಸಿದರು. ಕೋಲಾಟ ನೃತ್ಯವನ್ನು ಪ್ರದರ್ಶಿಸಿ, ಕರಾವಳಿಯ ಆಹಾರ ತಿನಿಸುಗಳನ್ನು ಪ್ರದರ್ಶನಕ್ಕಿಟ್ಟಿದ್ದರು. ಆಗಸ್ಟ್ 7ರಂದು ನಮ್ಮ ತಂಡ ರಕ್ಷಾಬಂಧನವನ್ನು ಆಚರಿಸಿ ಎಲ್ಲಾ ಶಿಬಿರಾರ್ಥಿಗಳಿಗೆ ರಾಖಿಯನ್ನು ಕಟ್ಟಿ ಭ್ರಾತೃತ್ವದ ಸಂದೇಶವನ್ನು ಸಾರಿದರು.

ಅಲ್ಲದೆ ಶಿಬಿರದಲ್ಲಿ ವಿವಿಧ ಚಟುವಟಿಕೆಗಳಾದ ಹೈಕಿಂಗ್, ನೆಟ್ ಪ್ಲೇಯಿಂಗ್, ಅಡುಗೆ ತಯಾರಿ, ಮುಖವರ್ಣಿಕೆ, ಡ್ರಾಯಿಂಗ್, ಕ್ರಾಫ್ಟ್‌ಗಳನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ ಭಾಗವಹಿಸಿದ ಸ್ಕೌಟ್-ಗೈಡ್‌ಗಳು ಹೊಸ ಅನುಭವ ಅವಿಸ್ಮರಣೀಯ ನೆನಪುಗಳನ್ನು ಹೊತ್ತು ತಂದಿದ್ದಾರೆ.

**– ದಿನೇಶ್. ಕೆ, ಸ್ಕೌಟ್ ಮಾಸ್ಟರ್**



# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ

ಕರ್ನಾಟಕ ರಾಜ್ಯದ ಮಾಜಿ ಸಚಿವರೂ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ಕರ್ನಾಟಕದ ರಾಜ್ಯ ಮುಖ್ಯ ಆಯುಕ್ತರಾದ **ಶ್ರೀ ಪಿ.ಜಿ.ಆರ್.ಸಿಂಧ್ಯ ಅವರಿಗೆ**
ಕರ್ನಾಟಕದ ಸ್ಕೌಟ್ಸ್ ಗೈಡ್ಸ್ ಚಳವಳಿಯ ಪದಾಧಿಕಾರಿಗಳು ಮತ್ತು ಕಾರ್ಯಕರ್ತರು ಸೆಪ್ಟೆಂಬರ್ 10ರಂದು
ಡಾ. ಅನಿಬೆಸೆಂಟ್ ತರಬೇತಿ ಕೇಂದ್ರದಲ್ಲಿ ಗೌರವಪೂರ್ವಕವಾಗಿ ಅರ್ಪಿಸಿದ **ಅಭಿನಂದನಾ ಪತ್ರ**

ಮಾನ್ಯರೆ,

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ ರಾಜ್ಯ ಸಂಸ್ಥೆಯ ರಾಜ್ಯ ಮುಖ್ಯ ಆಯುಕ್ತರಾದ ತಾವು ಬೆಂಗಳೂರು ಗ್ರಾಮಾಂತರ ಜಿಲ್ಲೆಯ (ಈಗಿನ ರಾಮನಗರ ಜಿಲ್ಲೆ) ದೊಡ್ಡಮರಳವಾಡಿಯ ರೈತ ಕುಟುಂಬದ ಶ್ರೀ. ಪಾಂಡುರಂಗರಾವ್ ಸಿಂಧ್ಯ ಮತ್ತು ಶ್ರೀಮತಿ ಸರಸ್ವತಿ ಬಾಯಿಯವರ ಸುಪುತ್ರರಾಗಿ ಸೆಪ್ಟೆಂಬರ್ 19, 1949ರಲ್ಲಿ ಜನಿಸಿರುತ್ತೀರಿ. ಇಂದು ನಮ್ಮೆಲ್ಲರ ಪ್ರೀತಿ ಗೌರವಗಳಿಗೆ ಪಾತ್ರರಾಗಿರುವ ತಾವು ನಮ್ಮ ಚಳವಳಿಯ ಧೀಮಂತ ನಾಯಕರಾಗಿರುತ್ತೀರಿ. ತಮ್ಮ ಕುಟುಂಬದ ಪೂರ್ವಜರು ಮೈಸೂರು ಮಹಾರಾಜರ ಆಳ್ವಿಕೆಯ ಸೈನ್ಯದಲ್ಲಿ ಉತ್ತಮ ಸೇವೆ ಸಲ್ಲಿಸಿ ಮಹಾರಾಜರ ಪ್ರಶಂಸೆಗೆ ಪಾತ್ರರಾಗಿ ದೇಶಭಕ್ತರಾಗಿದ್ದಂತಹವರು. ಅಂತಹ ವೀರ ಹಾಗು ಸಾಹಸದ ಪರಿಸರದಲ್ಲಿ ಬೆಳೆದ ತಮ್ಮ ನರನಾಡಿಗಳಲ್ಲಿ ಕ್ಷಾತ್ರ ತೇಜಸ್ಸಿನ ಕಾಂತಿಯು ಹೊರಹೊಮ್ಮುತ್ತಿದೆ. ರಾಜಕೀಯ, ಧಾರ್ಮಿಕ, ಶೈಕ್ಷಣಿಕ, ಸಾಮಾಜಿಕ ಹಾಗು ಸ್ಕೌಟ್ಸ್ ಮತ್ತು ಗೈಡ್ಸ್ ಕ್ಷೇತ್ರಗಳಿಗೆ ತಾವು ಅಪೂರ್ವ ಕೊಡುಗೆಯನ್ನು ನೀಡುತ್ತಿದ್ದೀರಿ.

ತಮ್ಮ ಪ್ರಾಥಮಿಕ ವಿದ್ಯಾಭ್ಯಾಸವು ಹುಟ್ಟೂರಿನಲ್ಲಿ ಆರಂಭಗೊಂಡು, ಹಾರೋಹಳ್ಳಿಯಲ್ಲಿ ಪ್ರೌಢಶಾಲಾ ಶಿಕ್ಷಣವು ಸಾಗಿ, ಸಿವಿಲ್ ಇಂಜಿನಿಯರ್ ಪದವಿಯನ್ನು ಬೆಂಗಳೂರಿನ ಆರ್.ವಿ. ಕಾಲೇಜಿನಲ್ಲಿ ಮುಗಿಸಿರುತ್ತೀರಿ. "ಬೆಳೆಯುವ ಸಿರಿ ಮೊಳಕೆ"ಯಲ್ಲಿ ಎಂಬಂತೆ ಕಾಲೇಜಿನ ದಿನಗಳಲ್ಲೇ ಜನನಾಯಕರಾಗಿ ಬೆಂಗಳೂರು ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘಕ್ಕೆ 1972–73ರಲ್ಲಿ ಅಧ್ಯಕ್ಷರಾಗಿದ್ದಿರಿ.

ಯುವಜನ ನಾಯಕರಾಗಿ ರಾಜ್ಯ ಮತ್ತು ರಾಷ್ಟ್ರಮಟ್ಟದಲ್ಲಿ ಸ್ವಯಂಪ್ರತಿಭೆಯಿಂದ ಸತ್ಕಾರ್ಯಗಳಲ್ಲಿ ತೊಡಗಿಸಿಕೊಂಡ ಹಿರಿಮೆ ತಮ್ಮದು. 1977ರ ತುರ್ತುಪರಿಸ್ಥಿತಿಯ ಸನ್ನಿವೇಶದಲ್ಲಿ ತಾವು ಬೆಂಗಳೂರಿನ ಸೆಂಟ್ರಲ್ ಜೈಲಿನಲ್ಲಿ 20 ತಿಂಗಳ ಸೆರೆಮನೆವಾಸ ಅನುಭವಿಸಿದಿರಿ. ಅಲ್ಲಿ ರಾಷ್ಟ್ರನೇತಾರರುಗಳಾದ ಅಟಲ್ ಬಿಹಾರಿ ವಾಜಪೇಯಿ, ಪ್ರೊ. ಮಧುದಂಡವತೆ, ಎಸ್.ಎನ್.ಮಿಶ್ರ, ಹೆಚ್.ಡಿ.ದೇವೇಗೌಡ, ರಾಮಕೃಷ್ಣ ಹೆಗಡೆ, ಜೆ.ಹೆಚ್.ಪಟೇಲ್, ಮುಂತಾದ ದಿಗ್ಗಜರೊಂದಿಗೆ ಬೆಳೆದ ಸ್ನೇಹ ಹಾಗು ಒಡನಾಟಗಳು ತಾವು ರಾಜಕೀಯ ಕ್ಷೇತ್ರಕ್ಕೆ ಪಾದಾರ್ಪಣೆ ಮಾಡುವ ಸದವಕಾಶವನ್ನು ಒದಗಿಸಿದವು. ತಾವು ಅಖಿಲ ಭಾರತ ವಿದ್ಯಾರ್ಥಿ ಪರಿಷತ್ ರಾಷ್ಟ್ರೀಯ ಕಾರ್ಯದರ್ಶಿಯಾಗಿ ಮೂರು ವರ್ಷಗಳ ಕಾಲ ಸೇವೆ ಸಲ್ಲಿಸಿದ್ದೀರಿ. ಈ ಸಮಯದಲ್ಲಿ ಲೋಕನಾಯಕ ಜಯಪ್ರಕಾಶ್ ನಾರಾಯಣ್ ಅವರ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿರುತ್ತೀರಿ.

"ತೊಟ್ಟ ಸಂಕಲ್ಪ, ದಿಟ್ಟ ಹೆಜ್ಜೆ" ತಮ್ಮ ಛಲ. ದೇಶ–ವಿದೇಶಗಳಲ್ಲಿ ಪರ್ಯಟನೆ ಮಾಡಿ, ಜ್ಞಾನವನ್ನು ವಿಸ್ತರಿಸಿಕೊಂಡಿರುವ ತಾವು ಆರು ಬಾರಿ ಕರ್ನಾಟಕ ರಾಜ್ಯ ವಿಧಾನಸಭೆ ಹಾಗು ವಿಧಾನ ಪರಿಷತ್ತಿನ ಸದಸ್ಯರಾಗಿ, ರಾಜ್ಯದ ಗೌರವಾನ್ವಿತ ಮುಖ್ಯಮಂತ್ರಿಗಳಾಗಿದ್ದ ಶ್ರೀಯುತರುಗಳಾದ ರಾಮಕೃಷ್ಣ ಹೆಗಡೆ, ಹೆಚ್.ಡಿ. ದೇವೇಗೌಡ, ಎಸ್.ಆರ್. ಬೊಮ್ಮಾಯಿ, ಜೆ.ಹೆಚ್. ಪಟೇಲ್, ಎನ್.ಧರ್ಮಸಿಂಗ್ ಅವರುಗಳ ಮಂತ್ರಿ ಮಂಡಲಗಳಲ್ಲಿ ಗೃಹ, ಕೈಗಾರಿಕೆ, ಹಣಕಾಸು, ಆರೋಗ್ಯ, ಸಾರಿಗೆ ಹಾಗು ಸಮಾಜ ಕಲ್ಯಾಣ ಇಲಾಖೆಗಳ ಸಚಿವರಾಗಿ ರಾಜ್ಯದ ಸರ್ವಾಂಗೀಣ ಅಭಿವೃದ್ಧಿಗೆ ಶ್ರಮಿಸಿದ್ದೀರಿ.

ತಾವು ರಾಜಕೀಯ ಜೀವನದಲ್ಲಿದ್ದರೂ, ಸ್ಕೌಟ್ಸ್–ಗೈಡ್ಸ್ ಸಂಸ್ಥೆಯ ಅಭಿವೃದ್ಧಿಯತ್ತಲೇ ಸದಾ ತಮ್ಮ ಚಿಂತನೆ ಹಾಗು ಯೋಜನೆಗಳು. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಅಧ್ಯಕ್ಷರಾಗಿ, ರಾಜ್ಯ ಸಂಸ್ಥೆಯ ಉಪಾಧ್ಯಕ್ಷರಾಗಿ ಹಾಗು ಧರ್ಮದರ್ಶಿಯಾಗಿ ಮೂರು ದಶಕಗಳಿಂದ ಚಳವಳಿಯ ಬೆಳವಣಿಗೆಗೆ ಮಾರ್ಗದರ್ಶನ ಮಾಡಿರುತ್ತೀರಿ. ಗಾಂಧಿತತ್ವದಲ್ಲಿ ನಂಬಿಕೆ ಇಟ್ಟುಕೊಂಡಿರುವ ನೀವು ಅಕ್ಟೋಬರ್ 02, 2014 'ಮಹಾತ್ಮ ಗಾಂಧಿ ಜಯಂತಿ'ಯಂದೇ ಕರ್ನಾಟಕ ರಾಜ್ಯದ ಮುಖ್ಯ ಆಯುಕ್ತರಾಗಿ ಚಳವಳಿಯ ಚುಕ್ಕಾಣಿ ಹಿಡಿದಿದ್ದೀರಿ.

"ಸಾಧನೆಗೆ ಸಾವಿರ ಸೋಪಾನಗಳು, ಸಾಧಕನ ಛಲಕ್ಕೆ ಸಾಹಸವೇ ಒರೆಗಲ್ಲು" ಎಂಬಂತೆ, ತಮ್ಮ ಆಕಾಂಕ್ಷೆಯ ಮಹತ್ವದ ಸೇವಾ ಕ್ಷೇತ್ರವೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ. ರಾಜ್ಯ ಮುಖ್ಯ ಆಯುಕ್ತರಾಗಿ ನಿರಂತರ

ಕಾರ್ಯನಿರ್ವಹಿಸುತ್ತಿರುವ ತಾವು, ಚಿಣ್ಣರ ಮನದಂಗಳದಲ್ಲಿ ನವಚೈತನ್ಯವನ್ನುಂಟು ಮಾಡಿದ ಹರಿಕಾರರಾಗಿದ್ದೀರಿ. ಚಳವಳಿಯ ಸಂಸ್ಥಾಪಕ ಲಾರ್ಡ್ ಬೇಡನ್ ಪಾವೆಲ್ಲರ ತತ್ವ, ಸಿದ್ಧಾಂತ, ಕೌಶಲಗಳತ್ತ ತಮಗೆ ಅಪಾರ ಒಲವು, ಆದರ್ಶಸಮಾಜ ಕಟ್ಟುವ ಕನಸಿನ ನನಸಿಗಾಗಿ ಸದಾ ಚಿಂತನೆ, ಆಲೋಚನೆ ಮಾಡುವ ತಾವು ನಾನಾ ಯೋಜನೆಗಳ ಅನುಷ್ಠಾನಕ್ಕೆ ನಿರಂತರ ಕಾರ್ಯಪ್ರವೃತ್ತರಾಗಿದ್ದೀರಿ. ತಾವು ಯುವಜನತೆಗೆ ಸ್ಫೂರ್ತಿಯ ಚಿಲುಮೆಯಾಗಿದ್ದೀರಿ. 2015ನೇ ಸಾಲಿನ 27ನೇ ಕರ್ನಾಟಕ ರಾಜ್ಯ ಜಾಂಬೋರೇಟ್‌ನ್ನು ಅತ್ಯಂತ ಯಶಸ್ವಿಗೊಳಿಸಿದ ಕೀರ್ತಿ ನಿಮ್ಮದಾಗಿದೆ. 17ನೇ ರಾಷ್ಟ್ರೀಯ ಜಾಂಬೂರಿಯ ಯಶೋಗಾಥೆಯನ್ನೇ ಬರೆದ ಧೀರದಿಟ್ಟನಾಯಕರಾಗಿ ವಿಜೃಂಭಿಸಿದ್ದೀರಿ, ತಮ್ಮೆಲ್ಲಾ ಸಾಧನೆಗಳು ಭಾರತಾಂಬೆಯ ಪಾದಗಳಿಗೆ ಅರ್ಪಿಸಿದ ಭಕ್ತಿಗೌರವಗಳಾಗಿವೆ. ಕರ್ನಾಟಕ ರಾಜ್ಯದಲ್ಲಿ ಅಂತರ್ರಾಷ್ಟ್ರೀಯ ಜಾಂಬೂರಿಯನ್ನು ಮಾಡುವ ನಿಮ್ಮ ಸದಾಶಯ ಕೈಗೂಡಲಿ ಎಂದು ಆಶಿಸುತ್ತೇವೆ.

ಯಶಸ್ಸಿನ ಸೋಪಾನಗಳು ಹತ್ತಲು ಕ್ಲಿಷ್ಟಕರವೆನಿಸಿದರೂ ದೃಢಮನಸ್ಸು ಹಾಗು ಕಾರ್ಯದಕ್ಷತೆ ಇದ್ದರೆ, ವ್ಯಕ್ತಿತ್ವವನ್ನು ಎತ್ತರಕ್ಕೆ ಒಯ್ಯುವಲ್ಲಿ ಸಂಶಯವಿಲ್ಲ. ಇತರರಿಗೆ ಮಾರ್ಗದರ್ಶನ, ಶಿಬಿರವಾಸ, ಮಕ್ಕಳೊಂದಿಗೆ ಶಿಕ್ಷಕರೊಂದಿಗೆ ಸಮಾಲೋಚನೆ, ಸ್ಕೌಟ್-ಗೈಡ್ ಮಕ್ಕಳಿಗೆ ಪ್ರವಾಸೋದ್ಯಮ ಇಲಾಖೆಯಿಂದ ತಾವು ಏರ್ಪಡಿಸಿದ ಕರ್ನಾಟಕ ದರ್ಶನವಂತೂ ರಾಜ್ಯದ ಚಳವಳಿಯ ಇತಿಹಾಸದಲ್ಲೇ ಹೊಸ ಅಧ್ಯಾಯವಾಗಿದೆ, ಹಿರಿಯ ದಳನಾಯಕ/ನಾಯಕಿಯರಿಗೆ ಗೌರವಾನ್ವಿತ ರಾಜ್ಯಪಾಲರಿಂದ ಗೌರವ ಪುರಸ್ಕಾರ ಕಾರ್ಯಕ್ರಮ ತಮ್ಮ ಸಾಧನೆಗೆ ಮತ್ತೊಂದು ಮೈಲಿಗಲ್ಲು. ತಾವು ಸಾಧಿಸಿದ ಶ್ರೇಷ್ಠ ಕಾರ್ಯ ಸಾಧನೆಗೆ ಮನ್ನಣೆಯಾಗಿ ರಾಷ್ಟ್ರದ ಅತ್ಯುನ್ನತ ಪ್ರಶಸ್ತಿಯಾದ "ಬೆಳ್ಳಿ ಆನೆ" ಪ್ರಶಸ್ತಿಯ ಗೌರವವನ್ನು, ಗೌರವಾನ್ವಿತ ರಾಷ್ಟ್ರಪತಿಗಳಾದ ಶ್ರೀ.ಪ್ರಣಬ್ ಮುಖರ್ಜಿ ಅವರು 2015 ಡಿಸೆಂಬರ್‌ನಲ್ಲಿ ರಾಷ್ಟ್ರಪತಿ ಭವನದಲ್ಲಿ ತಮಗೆ ಪ್ರದಾನ ಮಾಡಿರುತ್ತಾರೆ.

ಹಾಗೆಯೇ ಸ್ಕೌಟ್-ಗೈಡ್ ಚಳವಳಿಯ ಹಿಂದಿನ ರಾಜ್ಯ ಮುಖ್ಯ ಆಯುಕ್ತರುಗಳಾಗಿದ್ದ ದಿ॥ ಕೊಂಡಜ್ಜಿ ಬಸಪ್ಪರವರ ಮತ್ತು ದಿ॥ ವಿ.ಪಿ. ದೀನದಯಾಳು ನಾಯ್ಡುರವರ ಜನ್ಮಶತಮಾನೋತ್ಸವದ ಆಚರಣೆಯನ್ನು ಅದ್ದೂರಿಯಾಗಿ ರಾಷ್ಟ್ರ, ರಾಜ್ಯ, ಜಿಲ್ಲೆ ಮತ್ತು ಸ್ಥಳೀಯ ಹಂತಗಳಲ್ಲಿ ಏರ್ಪಡಿಸಿ ಅವರುಗಳ ಜನ್ಮಶತಮಾನೋತ್ಸವದ ಸಂದರ್ಭದಲ್ಲಿ ಹಲವಾರು ವಿಶೇಷ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲು ಮಾರ್ಗದರ್ಶನ ಮಾಡಿರುತ್ತೀರಿ.

ತಮ್ಮ ಸಾರ್ವಜನಿಕ ಜೀವನದ ಯಶಸ್ಸಿನ ಹಿಂದೆ ಕುಟುಂಬದವರ ಸಹಕಾರ, ಪ್ರೀತಿ, ವಿಶ್ವಾಸ, ಒಲುಮೆಯ ನಾಡಿಮಿಡಿತ ಸದಾ ಇದ್ದೇ ಇದೆ. ವಿಶಾಲ ಮನಸ್ಸು, ಪ್ರೋತ್ಸಾಹದ ನುಡಿ, ಸಹನೆಗಳನ್ನು ಮೈಗೂಡಿಸಿಕೊಂಡಿರುವ ತಮ್ಮ ಧರ್ಮಪತ್ನಿ ಶ್ರೀಮತಿ ಗೀತಾ ಸಿಂಧ್ಯರವರು "ಪ್ರತಿಯೊಬ್ಬ ಪುರುಷನ ಯಶಸ್ಸಿನ ಹಿಂದೆ ಒಬ್ಬ ಸ್ತ್ರೀ ಇದ್ದಾಳೆ" ಎಂಬುದಕ್ಕೆ ನಿದರ್ಶನರಾಗಿದ್ದಾರೆ. ತಮ್ಮ ಮಕ್ಕಳಾದ ಭರತ್, ಶರತ್ ಹಾಗು ಮಗಳು ಪೃಥ್ವಿ ಇವರ ವಾತ್ಸಲ್ಯಗಳು ತಮಗೆ ಸದಾ ಸ್ಫೂರ್ತಿಯಾಗಿವೆ.

ಸರಳತೆ, ಸಜ್ಜನಿಕೆ, ನಿಸ್ವಾರ್ಥತೆ, ಸೋದರತ್ವಗಳ ಮಾನವೀಯ ಮೂರ್ತಿಯಾಗಿರುವ ತಾವು, ಸ್ಕೌಟ್-ಗೈಡ್ ಚಳವಳಿಯ ಗೌರವದ ವ್ಯಕ್ತಿಯಾಗಿ, ಹೊರ ಹೊಮ್ಮಿ ಮುಂದಿನ 5 ವರ್ಷಗಳ ಅವಧಿಗೆ ಎಲ್ಲರ ಸದಾಶಯದಂತೆ ಕರ್ನಾಟಕ ರಾಜ್ಯದ ಮುಖ್ಯ ಆಯುಕ್ತರಾಗಿ ಅವಿರೋಧವಾಗಿ ಆಯ್ಕೆಯಾಗಿರುತ್ತೀರಿ. ತಾವು ಹಾಕಿಕೊಂಡಿರುವ ಎಲ್ಲಾ ಯೋಜನೆಗಳು ಕೈಗೂಡಲಿ, ಈಗಿನ 4.50 ಲಕ್ಷ ಸ್ಕೌಟ್ಸ್-ಗೈಡ್ಸ್‌ಗಳ ಸಂಖ್ಯೆ 10 ಲಕ್ಷವನ್ನು ದಾಟಬೇಕೆಂಬ ತಮ್ಮ ಸಂಕಲ್ಪ ಕಾರ್ಯಗತಗೊಳ್ಳಲಿ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ಅಭಿವೃದ್ಧಿಗಾಗಿ ತಾವು ಯೋಜಿಸಿರುವ ಎಲ್ಲಾ ಕಾರ್ಯಕ್ರಮಗಳಿಗೂ ನಮ್ಮ ಸಂಪೂರ್ಣ ಸಹಕಾರವಿದೆ ಎಂದು ತಿಳಿಸಲು ಹರ್ಷಿಸುತ್ತೇವೆ.

ಸದಾ ಹಸನ್ಮುಖದ ತಾವು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಗೆ ಒಂದು ದೊಡ್ಡ ಆಸ್ತಿ ಎಂದೇ ನಾವು ಭಾವಿಸಿದ್ದೇವೆ. ಮುಂದಿನ ದಿನಗಳಲ್ಲಿ ನಿಮಗೆ ಮತ್ತು ನಿಮ್ಮ ಕುಟುಂಬದವರಿಗೆ ಆಯುರಾರೋಗ್ಯವನ್ನು ಕರುಣಿಸಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತಾ ತಮಗೆ ರಾಜಕೀಯ ಕ್ಷೇತ್ರದಲ್ಲಿ ಇನ್ನೂ ಹೆಚ್ಚಿನ ಸ್ಥಾನ-ಮಾನಗಳು ಲಭಿಸಿ ತಮ್ಮಿಂದ ರಾಜ್ಯಕ್ಕೆ ಹೆಚ್ಚಿನ ಸೇವೆ ಸಿಗುವಂತಾಗಲಿ ಎಂದು ಆಶಿಸುತ್ತೇವೆ.

ದಿನಾಂಕ: 10 ಸೆಪ್ಟೆಂಬರ್ 2017

ಸ್ಥಳ: ಡಾ॥ ಅನಿಬೆಸೆಂಟ್ ಸ್ಕೌಟ್ಸ್ ಮತ್ತು ಗೈಡ್ಸ್
ರಾಜ್ಯ ತರಬೇತಿ ಮತ್ತು ಶಿಬಿರ ಕೇಂದ್ರ, ದೊಡ್ಡಬಳ್ಳಾಪುರ.

**ಸ್ಕೌಟ್-ಗೈಡ್ ಆತ್ಮೀಯ ಗೌರವಗಳೊಂದಿಗೆ,**
**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

## ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯರವರಿಗೆ ಅಭಿನಂದನೆ ಸಲ್ಲಿಸಿ ಸನ್ಮಾನಿಸಿದ ಸಂದರ್ಭದಲ್ಲಿ ಶ್ರೀ ಗೊ.ರು.ಚ. ರವರ ಆಶಯ ನುಡಿಗಳು



ಬಹುಶಃ ನೀವೆಲ್ಲ ಕೇಳಿರಬಹುದಾದ ಒಂದು ಪ್ರಸಂಗ: ಒಂದು ರಾಜ್ಯದಲ್ಲಿ ಖಾಲಿಯಾಗಿದ್ದ ಪ್ರಧಾನಿ ಹುದ್ದೆಗೆ ಅಲ್ಲಿನ ರಾಜ ಯೋಗ್ಯ ವ್ಯಕ್ತಿಯೊಬ್ಬನನ್ನು ಹುಡುಕುತ್ತಿದ್ದ. ಆ ರಾಜಧಾನಿಯಲ್ಲೇ ಒಬ್ಬ ಭಿಕ್ಷುಕನಿದ್ದ. ಅವನೊಬ್ಬ ಅನುಭವಿ ಸಂತನಂತಿದ್ದ. ಹಾಗಾಗಿ ಜನರೆಲ್ಲ ಅವನ ಬಗೆಗೆ ಭಕ್ತಿ ಗೌರವಗಳನ್ನು ತೋರಿಸುತ್ತಿದ್ದರು. ಅದನ್ನು ತಿಳಿದಿದ್ದ ರಾಜ ಆ ಭಿಕ್ಷುಕನನ್ನೇ ಪ್ರಧಾನಿಯನ್ನಾಗಿ ಘೋಷಿಸಿದ.

ಆ ಭಿಕ್ಷುಕನನ್ನು ಅರಮನೆಗೆ ಕರೆತರಿಸಿ, ಅವನು ತೊಟ್ಟಿದ್ದ ಚಿಂದಿ ಬಟ್ಟೆಗಳನ್ನೆಲ್ಲ ತೆಗೆಸಿ ಪ್ರಧಾನಿಗೆ ಒಪ್ಪುವ ವೇಷ ಭೂಷಣಗಳನ್ನು ತೊಡಿಸಿ, ಅವನ ಬೆರಳಿಗೆ ಮುದ್ರೆಯುಂಗುರ ಇಟ್ಟು, ಪ್ರಧಾನಿಯ ಕೆಲಸ ನಿರ್ವಹಿಸಬೇಕೆಂದು ಹೇಳಿದ.

ಆ ಭಿಕ್ಷುಕ ಪ್ರಧಾನಿ ಬಹುದೊಡ್ಡ ಪ್ರಜ್ಞಾವಂತನಾಗಿದ್ದ. ಅತ್ಯಂತ ಸಮರ್ಥವಾಗಿ ರಾಜ್ಯಭಾರ ನಡೆಸಿದ. ಜನರೆಲ್ಲ ಹಿಂದೆಂದೂ ಕಾಣದಷ್ಟು ನೆಮ್ಮದಿ ಅನುಭವಿಸಿದರು. ಅದನ್ನು ಕಂಡು ರಾಜನಿಗೂ ನಿಶ್ಚಿಂತೆ ಎನಿಸಿತು.

ಆದರೆ ಒಂದು ಕುತೂಹಲದ ಸಂಗತಿ. ಆ ಪ್ರಧಾನಿಯ ಕಾರ್ಯಾಲಯಕ್ಕೆ ಹೊಂದಿಕೊಂಡಂತೆ ಒಂದು ಸಣ್ಣಕೋಣೆ ಇತ್ತು. ಅವನು ಪ್ರತಿದಿನ ತನ್ನ ಕಛೇರಿಯನ್ನು ಬಿಡುವ ಮುನ್ನ ಒಮ್ಮೆ ಆ ಕೋಣೆಯ ಒಳಗೆ ಹೋಗಿ ಬಂದು ಮತ್ತೆ ಬಾಗಿಲು ಮುಚ್ಚಿ ಅದಕ್ಕೆ ಬೀಗ ಹಾಕುತ್ತಿದ್ದ.

ಇದನ್ನು ಗಮನಿಸುತ್ತಿದ್ದ ಅರಮನೆಯ ಸಿಬ್ಬಂದಿಗೆ ಅನುಮಾನ ಉಂಟಾಗಿ, ಒಂದು ದಿನ ಒಬ್ಬ ಆಪ್ತ ಸಿಬ್ಬಂದಿ ರಾಜನ ಕಿವಿಯಲ್ಲಿ "ಪ್ರಭೂ, ನಿಮ್ಮ ಪ್ರಧಾನಿ ನಿಮ್ಮ ನಿರೀಕ್ಷೆಗೆ ತಕ್ಕಂತೆ ಆಡಳಿತ ನಡೆಸಿ, ಜನರ ಮೆಚ್ಚುಗೆಗೆ ಪಾತ್ರನಾಗಿರುವುದೇನೋ ನಿಜ. ಆದರೆ ಆತನ ಕಛೇರಿಗೆ ಹೊಂದಿಕೊಂಡಿರುವ ಒಂದು ಕೋಣೆಗೆ ಪ್ರತಿದಿನ ಹೋಗಿ ಬರುತ್ತಿದ್ದಾನೆ. ಆ ಕೋಣೆಗೆ ಬೇರಾರೂ ಹೋಗದಂತೆ ಬೀಗಹಾಕಿಕೊಂಡಿದ್ದಾನೆ. ಅದರೊಳಗೆ ಏನಿದೆ ಎಂಬುದು ಯಾರಿಗೂ ತಿಳಿಯದು. ಏಕೋ ನಮಗೆಲ್ಲ ಸಂಶಯ ಉಂಟಾಗಿದೆ. ನಿಮ್ಮ ವಿರುದ್ಧ ಏನಾದರೂ ಪಿತೂರಿ ನಡೆಸಿರಬಹುದೋ ಏನೋ ! ಹೇಗಾದರೂ ಇರಲಿ, ನೀವು ಎಚ್ಚರ ವಹಿಸುವುದು ಒಳ್ಳೆಯದು" ಎಂದು ಹೇಳಿದ.

ಸಾಮಾನ್ಯವಾಗಿ ರಾಜರು ಮತ್ತು ಮೇಲಧಿಕಾರಿಗಳು ಇಂತಹ ಚಾಡಿ ಮಾತುಗಳನ್ನು ನಂಬುವುದು ಹೆಚ್ಚು. ಅಂತೇ ಆ ರಾಜನಿಗೂ ಅನುಮಾನ ಬಂದು, ಒಂದು ದಿನ ಪ್ರಧಾನಿಯನ್ನು ಕರೆದು, ನಾನು ಆ ಕೋಣೆಯನ್ನು ನೋಡಬೇಕು ಎಂದ. ಅದಕ್ಕೆ ಆ ಪ್ರಧಾನಿ 'ಅದರಲ್ಲಿ ನೀವು ನೋಡುವಂತಹದೇನೂ ಇಲ್ಲ' ಎಂದ. ಆದರೆ, ರಾಜ ನೋಡಲೇಬೇಕೆಂದು ಹೇಳಿದರೂ ಬೇಡವೆಂದ ಪ್ರಧಾನಿಯ ವರ್ತನೆಗೆ ಸಿಟ್ಟಿಗೆದ್ದ ರಾಜ ನಿನ್ನನ್ನು ಪ್ರಧಾನಿ ಪಟ್ಟದಿಂದ ತೆಗೆದುಹಾಕಿದ್ದೇನೆ ಎಂದ.

ತಕ್ಷಣವೇ ಆ ಪ್ರಧಾನಿ 'ಬಹಳ ಸಂತೋಷ' ಎಂದು ಹೇಳಿ, ಆ ಕೋಣೆಯ ಬಾಗಿಲು ಬೀಗ ತೆಗೆದು ರಾಜನನ್ನು ಒಳಗೆ ಕರೆದೊಯ್ದು. ಆದರೆ ರಾಜ ಅಲ್ಲಿ ಕಂಡದ್ದೇನು? ಆ ಪ್ರಧಾನಿ ಭಿಕ್ಷುಕನಾಗಿದ್ದಾಗ ತೊಡುತ್ತಿದ್ದ ಚಿಂದಿ ಬಟ್ಟೆ! ರಾಜನಿಗೆ ಸೋಜಿಗವೆನಿಸಿ, 'ಇದೇನಿದು', ಎಂದು ಪ್ರಧಾನಿಯನ್ನು ಕೇಳಿದ.

ಅದಕ್ಕೆ ಆ ಭಿಕ್ಷುಕ "ಏನಿಲ್ಲ. ನೀವು ನನಗೆ ಕೊಟ್ಟಿದ್ದ ಅಧಿಕಾರ ಅಶಾಶ್ವತ. ಈ ಅರಮನೆಯ ಸಂಪತ್ತು, ಸವಲತ್ತೂ, ಎಲ್ಲಾ ತಾತ್ಕಾಲಿಕ. ಇದನ್ನು ಅರಿತೇ ಒಂದಲ್ಲ ಒಂದು ದಿನ ಇಂತಹ ಸಂದರ್ಭ ಬರುವುದೆಂದು ತಿಳಿದೇ ನನ್ನ ಮೊದಲಿನ ಬಟ್ಟೆಯನ್ನು ಈ ಕೋಣೆಯಲ್ಲಿ ಕಾಯ್ದಿಟ್ಟಿದ್ದೆ. ನಾನು ಪ್ರತಿದಿನ ಈ ಕೋಣೆಯೊಳಕ್ಕೆ ಬಂದು ಹೋಗುತ್ತಿದ್ದುದನ್ನು ನೋಡುತ್ತಿದ್ದ ಅರಮನೆಯ ಸಿಬ್ಬಂದಿಗೆ ಸಹಜವಾಗಿ ಅನುಮಾನ ತಲೆದೋರಿ, ನಿಮ್ಮಲ್ಲೂ ಅನುಮಾನ ಹುಟ್ಟಿಸಿದ್ದಾರೆ. ಏನೇ ಇರಲಿ, ನೀವು ನನ್ನನ್ನು ಪ್ರಧಾನಿಪಟ್ಟದಿಂದ ತೆಗೆದು ಹಾಕಿ ನನಗೆ ಬಹು ದೊಡ್ಡ ಉಪಕಾರ ಮಾಡಿದಿರಿ. ಇದಕ್ಕೆ ನಾನು ಕೃತಜ್ಞನಾಗಿದ್ದೇನೆ. ಒಂದು ವೇಳೆ ನಾನು ಇನ್ನೂ ಕೆಲವು ಕಾಲ ಇಲ್ಲೇ ಇದ್ದಿದ್ದರೆ, ನಾನೂ ಇಲ್ಲಿನ ಅಂತಸ್ತು,

ಅಧಿಕಾರಗಳಿಗೆ ಒಗ್ಗಿಕೊಂಡುಬಿಡುತ್ತಿದ್ದೇನೋ ಏನೋ? ಸದ್ಯ ನಿಮ್ಮ ಉಪಕಾರದಿಂದ ನಾನೀಗ ಮೊದಲಿನಂತೆ ಸ್ವತಂತ್ರನಾದೆ. ನನಗೆ ಭಿಕ್ಷೆ ಬೇಡುವ ಕಾಯಕವಿದ್ದೇಇದೆ". ಎಂದು ಹೇಳುತ್ತಲೇ ಅರಮನೆಯ ವೇಷ-ಭೂಷಣಗಳನ್ನೆಲ್ಲ ಕಳಚಿ, ತನ್ನ ಮೊದಲಿನ ಚಿಂದಿಬಟ್ಟೆಯನ್ನೇ ತೊಟ್ಟು "ಪ್ರಭು, ನೀವಿನ್ನು ಯಾವುದೇ ಅನುಮಾನ ಇಟ್ಟುಕೊಳ್ಳಬೇಕಾಗಿಲ್ಲ. ನಿಮಗೆ ಒಳ್ಳೆಯದಾಗಲಿ. ನಾನಿನ್ನು ಬರುತ್ತೇನೆ" ಎಂದು ಹೇಳಿ ಅಲ್ಲಿಂದ ಹೊರಟೇ ಹೋದನಂತೆ!

ಇಂದು ಇಲ್ಲಿ ನಡೆಯುತ್ತಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಸರ್ವಸದಸ್ಯರ ವಾರ್ಷಿಕ ಸಭೆಯ ಸಂದರ್ಭಕ್ಕೂ ನಾನು ಹೇಳಿದ ಪ್ರಸಂಗಕ್ಕೂ ಏನು ಸಂಬಂಧ ಎಂದು ನಿಮಗೆಲ್ಲ ಅನಿಸಿರಬೇಕು. ಸಂಬಂಧವಿದೆ. ಆದರೆ ಇದು ಸ್ವಾರಸ್ಯದ ಸಂಬಂಧ. ಇದ್ದಕ್ಕಿದ್ದಂತೆ ಪ್ರಧಾನಿ ಪಟ್ಟ ಬಿಡಬೇಕೆಂದು ಆ ರಾಜ ಹೇಳಿದಂತೆ, ಇದ್ದಕ್ಕಿದ್ದಂತೆ ಮಾತನಾಡಬೇಕೆಂದು ನಮ್ಮ ರಾಜ್ಯ ಮುಖ್ಯ ಆಯುಕ್ತರು ಹೇಳಿಬಿಡುತ್ತಾರೆ. ಎಂದಾದರೊಂದು ದಿನ ಅಂತಹ ಸಂದರ್ಭ ಬಂದೇ ಬರುವುದೆಂದು ತಿಳಿದಿದ್ದ ಆ ಭಿಕ್ಷುಕ ತನ್ನ ಚಿಂದಿಬಟ್ಟೆಯನ್ನು ಕಾಯ್ದಿಟ್ಟುಕೊಂಡಿದ್ದ. ಅವನ್ನೇ ತೊಟ್ಟು ಅರಮನೆಯನ್ನು ಬಿಟ್ಟು ಹೋದ. ಹಾಗೆಯೇ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಯಾವುದೇ ಕಾರ್ಯಕ್ರಮಕ್ಕೆ ಬಂದರೂ, ಮಾತನಾಡಿ ಎಂದು ಹೇಳಿ ಬಿಟ್ಟಾರು ಎಂಬುದನ್ನು ನಿರೀಕ್ಷಿಸಿಯೇ ನಾನೂ ಒಂದು ಸಣ್ಣ ಟಿಪ್ಪಣಿ ಸಿದ್ಧಪಡಿಸಿಟ್ಟುಕೊಂಡೇ ಬಂದಿದ್ದೇನೆ.

ಇದು ಉಪನ್ಯಾಸವೂ ಅಲ್ಲ; ಉಪದೇಶವೂ ಅಲ್ಲ, ವೃದ್ಧನೊಬ್ಬ ತನ್ನ ಬಂಧು-ಬಳಗದೊಂದಿಗೆ ಹಂಚಿಕೊಳ್ಳುವ ಅನಿಸಿಕೆ ಅಷ್ಟೆ. ಯಾವುದಾದರೂ ನಿರ್ದಿಷ್ಟ ವಿಷಯವಿದ್ದರೆ ಅದನ್ನು ಕುರಿತು ಉಪನ್ಯಾಸ ಮಾಡಬಹುದು ಅಥವಾ ಕ್ಷೇತ್ರತಜ್ಞರಾದರೆ ಉಪದೇಶವನ್ನು ಮಾಡಬಹುದು. ಆದರೆ, ಇದು ಉಪನ್ಯಾಸದ ವೇದಿಕೆಯಲ್ಲ. ಉಪದೇಶ ಮಾಡುವೆನೆಂದರೆ ನಾನು ಕ್ಷೇತ್ರ ತಜ್ಞನಲ್ಲ.

ಹೋಳಿ ಹಬ್ಬ ಆಚರಿಸುವವರ ಮಧ್ಯೆ ಇದ್ದವರ ಬಟ್ಟೆಯೂ ಬಣ್ಣವಾಗುವಂತೆ, ಕಳೆದ ನಾಲ್ಕೈದು ದಶಕಗಳಿಂದ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ನಿಮ್ಮೆಲ್ಲರ ಸಂಪರ್ಕದಲ್ಲಿರುವ ಕಾರಣ ನಾನೂ ನಿಮ್ಮ ಬಳಗದ ಭಾಗವಾಗಿದ್ದೇನೆ. ನಿಮ್ಮದು ಕಡು ಬೂದುಬಣ್ಣದ ಸಮವಸ್ತ್ರ, ನನ್ನದು ಕಡು ಬಿಳಿಯ ಬಣ್ಣದ ಸಮವಸ್ತ್ರ. ಆದರೆ ಇಬ್ಬರದೂ ಸಮಚಿತ್ತ.

ಆದರೆ, ವಯಸ್ಸಿನಿಂದಾಗಿ ಆನಂದ ಭೈರವಿಗೆ ಆಕಳಿಸಿ, ಮಧ್ಯಮಾವತಿಯ ಹೊತ್ತಿಗೆ ನಿದ್ದೆಹೋಗುವವರ ಅವಸ್ಥೆ ನನ್ನದು. ಆದರೂ ಚಟುವಟಿಕೆಗಳ ಚಿಲುಮೆಯಂತಿರುವ ನಿಮ್ಮ ಮಧ್ಯೆ ಅಂತಹ ಆಲಸ್ಯಕ್ಕೆ ಅವಕಾಶವಿಲ್ಲ ಎಂತಲೇ ಇಂದಿನ ಸಂದರ್ಭಕ್ಕೆ ಸಲ್ಲುವ ನಾಲ್ಕು ಮಾತು ಆಡುತ್ತಿದ್ದೇನೆ. ನನ್ನ ಮಾತುಗಳಲ್ಲಿ ನೀವು ಈಗಾಗಲೇ ಕೇಳಿರುವ ಮಾತುಗಳಿದ್ದರೆ, ಮಾತಿನಲ್ಲಿ ಅಸಾಂಗತ್ಯಗಳಿದ್ದರೆ ನಿಮ್ಮ ಕ್ಷಮೆ ಇರಲಿ.

ನಮ್ಮ ಸ್ಕೌಟ್ಸ್ ಮತು ಗೈಡ್ಸ್ ಸಂಸ್ಥೆಯ ಸಾಕಷ್ಟು ವಾರ್ಷಿಕ ಸಭೆಗಳಲ್ಲಿ ನಾನು ಪಾಲ್ಗೊಂಡಿದ್ದೇನೆ. ಈ ಸಲದ ಸಭೆಗೆ ಒಂದು ವಿಶೇಷ ಮಹತ್ವವಿದೆ ಎಂದು ತಿಳಿದಿದ್ದೇನೆ. ಅದೆಂದರೆ ನಮ್ಮ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾಗಿ ಕಳೆದ ಮೂರು ವರ್ಷಗಳಿಂದ ಸ್ಮರಣೀಯ ಸೇವೆ ಸಲ್ಲಿಸಿರುವ ಮಾನ್ಯ ಶ್ರೀ ಪಿ.ಜಿ.ಆರ್.ಸಿಂಧ್ಯ ಅವರು ಮುಂದಿನ ಐದು ವರ್ಷಗಳ ಅವಧಿಗೂ ಮತ್ತೆ ಅವಿರೋಧವಾಗಿ ಆಯ್ಕೆಯಾಗಿರುವುದು ಮತ್ತು ಚಳವಳಿಯ ಕಾರ್ಯಕರ್ತರು ಅವರನ್ನು ಆದರದಿಂದ ಅಭಿನಂದಿಸಿರುವುದು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಂತೆಯೇ ಕಳೆದ ನಾಲ್ಕೈದು ದಶಕಗಳಿಂದ ಬಲ್ಲ ಮತ್ತು ನಾನು ತುಂಬ ಗೌರವದಿಂದ ಕಾಣುತ್ತಿರುವ ಶ್ರೀ ಸಿಂಧ್ಯವರನ್ನು ಸರ್ವಾನುಮತದಿಂದ ಆಯ್ಕೆಮಾಡಿರುವ ನಿಮ್ಮನ್ನೆಲ್ಲ ನಾನು ಅಭಿನಂದಿಸುತ್ತೇನೆ. ಹಾಗೆಯೇ ಅಭಿನಂದಿತರಾಗಿರುವ ಶ್ರೀ ಸಿಂಧ್ಯ ಅವರನ್ನು ಮನತುಂಬಿ ಅಭಿನಂದಿಸುತ್ತೇನೆ.

ಟಿ.ಪಿ.ಕೈಲಾಸಂ ಅವರ ಒಂದು ಮಾತಿದೆ. " ಈ ಭೂಮಿಯಲ್ಲಿ ಜೀವಿಸಲಿಕ್ಕೆ ಅವಕಾಶ ಕಲ್ಪಿಸಿರುವ ದೇವರಿಗೆ ನಾವು ಕೊಡಬೇಕಾದ ಬಾಡಿಗೆ ಎಂದರೆ ಲೋಕಕ್ಕೆ ಬೇಕಾಗಿ ಬದುಕುವುದು" ಎಂದಿದ್ದಾರೆ. ಆ ಮಾತಿಗೆ ಅನುಗುಣವಾಗಿ ಜನಹಿತ ಕಾರ್ಯಕ್ಕೆ ತಮ್ಮನ್ನು ಅರ್ಪಿಸಿಕೊಂಡಿರುವ ಅಪರೂಪದ ವ್ಯಕ್ತಿ ಶ್ರೀ ಸಿಂಧ್ಯ ಅವರು.

ಸಂದಿಗ್ಧ ಸಮಯದಲ್ಲಿ ಸ್ಥೈರ್ಯ, ಉತ್ಕರ್ಷದ ಸ್ಥಿತಿಯಲ್ಲಿ ಸಂಯಮ, ಸ್ಪರ್ಧೆಯ ಸಂದರ್ಭದಲ್ಲಿ ಕ್ರೀಡಾ ಮನೋಭಾವ, ಸದಾ ಅರಿವಿನ ಅಭಿಲಾಷೆ, ನಿರಂತರ ಸೇವಾ ಶ್ರದ್ಧೆ, ವಿವಿಧ ಸ್ತರಗಳ ಜನಸಂಪರ್ಕ, ವೈಯಕ್ತಿಕ ಸಜ್ಜನಿಕೆ,

ಮಾಡಿದೆನೆಂಬುದು ಮನದಲ್ಲಿ ಹೊಳೆಯದ ನಿರ್ಲಿಪ್ತತೆ, ಸರ್ವರನ್ನು ಸಮದೃಷ್ಟಿಯಿಂದ ಕಾಣುವ ಸಮಚಿತ್ತ, ಹೀಗೆ ಒಬ್ಬ ಸಭ್ಯ ಸಾರ್ವಜನಿಕ ವ್ಯಕ್ತಿಯಲ್ಲಿ ಇರಬೇಕಾದ ಸದ್ಗುಣಗಳನ್ನೆಲ್ಲ ನಾನು ಶ್ರೀ ಸಿಂಧ್ಯ ಅವರಲ್ಲಿ ಕಂಡಿದ್ದೇನೆ. ಈ ಗುಣಗಳೆಲ್ಲ ನಿಜವಾದ ಸ್ಕೌಟ್ ಮತ್ತು ಗೈಡ್‌ಗಳಲ್ಲಿ ಇರಬೇಕಾದ ಗುಣಗಳೇ ಎಂದು ಬೇರೆ ಹೇಳಬೇಕಾಗಿಲ್ಲ.

ಸ್ವಯಂ ಸೇವಾ ಸಂಸ್ಥೆಗಳ ಸೇವೆ ಸರ್ಕಾರಿ ಸೇವೆಯಂತಲ್ಲ. ಸರ್ಕಾರಿ ಸೇವೆಯಲ್ಲಿ ಕಾನೂನು-ಕಟ್ಟಳೆಗಳ ರಕ್ಷಣೆ ಇದ್ದರೆ, ಸ್ವಯಂಸೇವಾ ಸಂಸ್ಥೆಗಳಲ್ಲಿ ಸೇವೆ ಮತ್ತು ತ್ಯಾಗಗಳ ಅರ್ಪಣೆ ಅಗತ್ಯವಾಗುತ್ತದೆ.

ಇತ್ತೀಚೆಗಂತೂ ನಮ್ಮ ಜನಸಮುದಾಯದ ಮನೋಭಾವ ಒಂದು ರೀತಿಯ ಸಾಮೂಹಿಕ ಸನ್ನಿಗೆ ಒಳಗಾದಂತಿದೆ. ವರಕವಿ ಡಾ॥ ಬೇಂದ್ರೆ ಅವರು ತಮ್ಮ ಒಂದು ಕವನದಲ್ಲಿ "ನಮ್ಮ ಜನ ಸಾಮಾನ್ಯರಲ್ಲಿ ಸಾಕ್ರಟೀಸ್ ಹೇಳಿದ್ದನ್ನು ಕೇಳುತ್ತಾರೆ, ಅವನಿಗೇ ವಿಷ ಕುಡಿಸುತ್ತಾರೆ. ಏಸು ಕ್ರಿಸ್ತನ ಮಾತನ್ನು ಕೇಳುತ್ತಾರೆ, ಅವನನ್ನೇ ಶಿಲುಬೆಗೆ ಏರಿಸುತ್ತಾರೆ. ಪೈಗಂಬರನ ಮಾತುಗಳನ್ನು ಕೇಳುತ್ತಾರೆ. ಅವನನ್ನೇ ಊರು ಬಿಡಿಸುತ್ತಾರೆ. ಗಾಂಧಿ ಮಾತನ್ನು ಕೇಳುತ್ತಾರೆ. ಅವರನ್ನೇ ಗುಂಡಿಟ್ಟು ಕೊಲ್ಲುತ್ತಾರೆ" ಎಂದಿದ್ದಾರೆ.

ಇಂತಹ ಜನರ ಮಧ್ಯೆ ಸಾರ್ವಜನಿಕ ಸೇವೆ ಸಲ್ಲಿಸುವುದು ತಿಳಿದಷ್ಟು ಸುಗಮವಲ್ಲ. ಆದರೂ ಸ್ವಯಂ ಸೇವೆಯ ಸಂಕಲ್ಪ ಮಾಡಿದ, ಅದಕ್ಕೆ ಬದ್ಧನಾದ ವ್ಯಕ್ತಿ ಇದಾವುದನ್ನು ಲೆಕ್ಕಿಸದೆ ಸೇವೆಗೆ ತೊಡಗುತ್ತಾನೆ. ಏಕೆಂದರೆ, ಅವನಿಗೆ ನಮ್ಮ ಬದುಕಿನ ಅವಧಿ ಸೀಮಿತ, ನಿರ್ಧರಿತ, ಅನಿಶ್ಚಿತ ಎಂಬುದು ತಿಳಿದಿದೆ. ಆ ಅವಧಿಯನ್ನ ಸಾರ್ಥಕವಾಗಿ ಬಳಸಬೇಕೆಂದು ಅವನು ನಿರ್ಧರಿಸುತ್ತಾನೆ.

ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಂತಹ ಸಾರ್ವಜನಿಕ ಸೇವೆಯಲ್ಲಿರುವ ನೀವೆಲ್ಲರೂ ಅಂತಹ ಸಂಕಲ್ಪಸಿದ್ಧರೆಂದೇ ನಾನು ಭಾವಿಸಿದ್ದೇನೆ. ನಾನು ಆಗಾಗ ಹೇಳುವ ಲೋಕ ಪ್ರಸಿದ್ಧ ಚಿಂತಕ ಖಲೀಲ್ ಗಿಬ್ರಾನ್‌ನ ಒಂದು ಮಾತಿದೆ, "ನಿನ್ನನ್ನು ಸೃಷ್ಟಿಸಿದ ದೇವರನ್ನು ಪ್ರೀತಿಸುವ ಜನರನ್ನು ಬಿಟ್ಟು ಏಕೆ ಎಲ್ಲಿಗೆ ಹೋಗುತ್ತಿರುವೆ? ಒಂದು ವೇಳೆ ಜನರಿಗಿಂತ ನೀನೇ ಉತ್ತಮನಾಗಿದ್ದರೆ, ಅವರ ಬಳಿ ಹೋಗಿ, ಅವರನ್ನು ಉತ್ತಮರನ್ನಾಗಿಸು ಅಥವಾ ನಿನಗಿಂತ ಜನರೇ ಉತ್ತಮವಾಗಿದ್ದರೆ, ಆಗಲೂ ನೀನು ಜನರ ಬಳಿಗೇ ಹೋಗಿ ನೀನೂ ಉತ್ತಮನಾಗು", ತುಂಬ ಅರ್ಥಪೂರ್ಣ ಮಾತು.

ವಿಶ್ವ ಪ್ರಸಿದ್ಧ ಬೆಂಜಮಿನ್ ಫ್ರಾಂಕ್ಲಿನ್ ಒಂದು ಕಡೆ "ನಿಮ್ಮನ್ನು ಜನ ಮರೆಯಬಾರದು ಎಂದಿದ್ದರೆ, ಅವರು ಓದಲು ಯೋಗ್ಯವಾದ ವಿಷಯವನ್ನು ಕುರಿತು ಬರೆಯಿರಿ, ಇಲ್ಲವೇ ಜನರಿಗೆ ಅಗತ್ಯವಾದ ಯೋಗ್ಯ ಕಾರ್ಯವನ್ನು ಮಾಡಿರಿ" ಎಂದಿದ್ದಾನೆ. ಮಾನ್ಯ ಸಿಂಧ್ಯ ಅವರು ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಗೆ ಅಂತಹ ಯೋಗ್ಯ ಸೇವೆ ಸಲ್ಲಿಸಿದ್ದಾರೆ. ಎಂತಲೇ ಅವರು ಸ್ಮರಣೀಯರು.

ಜೀವಂತ ಸಮಾಜದ ಲಕ್ಷಣವೆಂದರೆ, ಸಮಾಜದ ಬದುಕನ್ನು ಸುಗಮಗೊಳಿಸುವ ಸ್ಮರಣೀಯ ಸೇವೆ ಸಲ್ಲಿಸಿದವರನ್ನು ಗೌರವಿಸುವುದು. ಇಂತಹ ಗೌರವ, ಸನ್ಮಾನ, ಅಭಿನಂದನ ಕಾರ್ಯಕ್ರಮಗಳ ಮುಖ್ಯ ಆಶಯ ಅಂತಹ ಗಣ್ಯ ವ್ಯಕ್ತಿಗಳಿಗೆ ಕೃತಜ್ಞತೆ ಸಲ್ಲಿಸುವುದು ಮತ್ತು ಅವರಿಗೆ ಶುಭ ಹಾರೈಸುವುದು. ಅಂತೇ ನಾವೆಲ್ಲ ಇಂದು ಮಾನ್ಯ ಸಿಂಧ್ಯ ಅವರಿಗೆ ನಮ್ಮ ಕೃತಜ್ಞತೆಯನ್ನು ಅರ್ಪಿಸಿದ್ದೇವೆ, ಮುಂದಿನ ಅವರ ಹಾದಿಗೆ ಶುಭವನ್ನು ಹಾರೈಸಿದ್ದೇವೆ.

ಶ್ರೀ ಸಿಂಧ್ಯ ಅವರು ಶುದ್ಧ ರಾಜಕಾರಣಿಯಾಗಿದ್ದರೂ ಅದನ್ನು ಅಷ್ಟಾಗಿ ಅಂಟಿಸಿಕೊಳ್ಳದ ನಿರ್ಲಿಪ್ತರು. ನಿಷ್ಠೆ ಮತ್ತು ನಿಸ್ವಾರ್ಥ ದೃಷ್ಟಿಯಿಂದ ಕಳೆದ 40 ವರ್ಷಗಳಿಂದ ರಾಜಕೀಯದ ಜೊತೆಗೇ ನಾಡಿನ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ ಕ್ಷೇತ್ರಗಳಲ್ಲೂ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಮಹಾಕವಿ ಕುವೆಂಪು ಅವರ ಮಾತಿನಂತೆ, ಶ್ರೀ ಸಿಂಧ್ಯ ಅವರಿಗೆ 'ಆದರ್ಶ' ಎನ್ನುವುದು ನಿತ್ಯಪಠಣದ ಮಂತ್ರವಲ್ಲ. ಅದು ಅವರ ಜೀವನದ ಉಸಿರೇ ಆಗಿದೆ. 'ಸೇವೆಯ ಫಲ ಸೇವೆ' ಎಂಬ ಗಾಂಧೀಜಿ ಮಾತಿನಲ್ಲಿ ಅವರಿಗೆ ನಂಬಿಕೆಯಿದೆ.

ಶ್ರೀ ಸಿಂಧ್ಯಾಅವರು ಮತ್ತು ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯಲ್ಲಿ ಕ್ರಿಯಾಶೀಲರಾಗಿರುವ ನಿಮ್ಮೆಲ್ಲರನ್ನೂ ನೋಡಿದಾಗ ನನಗೂ ಉತ್ಸಾಹ ಉಕ್ಕುತ್ತದೆ. ಆದರೆ ನನ್ನ ವಯಸ್ಸು ಆ ಉತ್ಸಾಹವನ್ನು ಹತ್ತಿಕ್ಕುತ್ತದೆ. ನಾನು ನಿಮ್ಮಂತೆ ಸೇವೆ ಸಲ್ಲಿಸಲು ಆಗುತ್ತಿಲ್ಲವಲ್ಲಾ ಎಂಬ ಕೊರಗು ನನ್ನದು.

೮೦॥ ಹಿರಿಯ ಕವಿ ಶಾಂತರಸ ಅವರ ಒಂದು ಕವನದ ನಾಲ್ಕು ಸಾಲುಗಳು ಹೀಗಿವೆ :

**"ಮುಗಿಯ ಬಂದಿದೆ ಎಣ್ಣೆ ದೀಪದಲ್ಲಿ, ಮಾಡುವುದು ಬಹಳವಿತ್ತು**
**ಕತ್ತಲೆಯನಪ್ಪಿದೆ ದೀಪ ಉರಿಯುವಾಗ, ನೋಡುವುದು ಬಹಳವಿತ್ತು**
**ಒದ್ದಾಡುತಿದೆ ಜೀವತಾ ಮಬ್ಬುಸಂಜೆಯ ಜಾಲದಲಿ ಸಿಲುಕಿ**
**ಉಷೆಯಲ್ಲಿ ಮಿಂದು ಉದಯರಾಗವನು ಹಾಡುವುದು ಬಹಳವಿತ್ತು".**

ಹಾಗೆಯೇ ನನ್ನದೂ ಈಗ ಪಶ್ಚಾತಾಪ ಪಡುವ ಸಮಯ. ಆದರೂ ಉಸಿರಾಡುತ್ತಿರುವವರೆಗೆ ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್ ಬಂಧುಗಳ ಜೊತೆಯಲ್ಲಿ ಇರುವಂತಾದರೆ ಸಾಕು ಎನ್ನುವುದೇ ನನ್ನ ಅಪೇಕ್ಷೆ.

ಬಂಧುಗಳೇ, ಇತರರು ನಮ್ಮನ್ನು ಹೇಗೆ ಕಾಣಬೇಕೆಂದು ನಾವು ನಿರೀಕ್ಷಿಸುತ್ತೇವೆಯೇ ಹಾಗೆ ನಾವು ನಡೆದುಕೊಳ್ಳಬೇಕು. ನಮಗೆ ನೋವು ಬೇಡವೆಂದರೆ ನಾವು ಇತರರನ್ನು ನೋಯಿಸಬಾರದು. ನಮಗೆ ಸುಖ ಬೇಕೆಂದರೆ, ಇತರರನ್ನು ಸುಖವಾಗಿಡಲು ಪ್ರಯತ್ನಿಸಬೇಕು. ಎಲ್ಲಕ್ಕಿಂತ ಮುಖ್ಯವಾಗಿ ನಮ್ಮ ಶೀಲ-ಚಾರಿತ್ರ್ಯಗಳಿಗೆ ಭಂಗ ಬರದಂತೆ ಎಚ್ಚರ ವಹಿಸಬೇಕು.

ಅಂತಹ ಶೀಲ ಚಾರಿತ್ರ್ಯಗಳನ್ನು, ನೀತಿ ನಿರ್ಮಲತೆಗಳನ್ನು ರಕ್ಷಿಸಿಕೊಂಡು, ಭಾರತದ ಇಂದಿನ ಅತ್ಯಂತ ಮುಖ್ಯ ಅಗತ್ಯವಾದ ಸಾತ್ವಿಕ ಸಮಾಜ ನಿರ್ಮಾಣಕ್ಕೆ ಸಲ್ಲುವಂತಹ ಮಕ್ಕಳನ್ನು ಬೆಳೆಸಲು ನಾವೆಲ್ಲ ಸಂಕಲ್ಪಮಾಡೋಣ.

**– ಗೊ.ರು. ಚನ್ನಬಸಪ್ಪ**

## ವಿಭಾಗೀಯ ಮಟ್ಟದ ಕಬ್ಸ್-ಬುಲ್‌ಬುಲ್ಸ್ ಪದಕ ತರಬೇತಿ ಶಿಬಿರ

ಸೆಪ್ಟೆಂಬರ್ 7 ರಿಂದ 9 ರ ವರೆಗೆ ಭಾರತ್ ಸ್ಕೌಟ್ಸ್-ಗೈಡ್ಸ್, ಕರ್ನಾಟಕ ವತಿಯಿಂದ ವಿಭಾಗೀಯ ಮಟ್ಟದ ಕಬ್ಸ್ ಮತ್ತು ಬುಲ್-ಬುಲ್ಸ್ ಪದಕ ತರಬೇತಿ ಶಿಬಿರವನ್ನು ಜಿಲ್ಲಾ ಕೇಂದ್ರ ಕಛೇರಿ, ಮೈಸೂರು ಇಲ್ಲಿ ಆಯೋಜಿಸಲಾಗಿತ್ತು.

105 ಬುಲ್-ಬುಲ್ಸ್ ಮತ್ತು 95 ಕಬ್ಸ್‌ಗಳು ಮೈಸೂರು ಮತ್ತು ಬೆಳಗಾವಿ ವಿಭಾಗದಿಂದ ಈ ಶಿಬಿರದಲ್ಲಿ ಪಾಲ್ಗೊಂಡಿದ್ದರು. ಶಿಬಿರದಲ್ಲಿ ತಾರಾ ಕಥೆ. ಜಂಗಲ್ ಸ್ಟೋರಿ, ಬುಲ್-ಬುಲ್ ನಾದ, ಗಂಟುಗಳೂ, ಆರೋಗ್ಯದ ನಿಯಮಗಳು, ಕಥೆ ಹೇಳುವುದು, ಪ್ರಾವೀಣ್ಯತ ಪದಕಗಳನ್ನು ಪಡೆಯುವ ಬಗ್ಗೆ ಲಾಗ್ ಪುಸ್ತಕ ಬರೆಯುವ ಬಗ್ಗೆ, ದಿನಕ್ಕೊಂದು ಉತ್ತಮ ಕೆಲಸ ಮಾಡುವ ಬಗ್ಗೆ. ಮಕ್ಕಳ ಸಿಕ್ಸರ್ಸ್ ಪದ್ಧತಿಯ ಮೂಲಕ ತರಬೇತಿ ನೀಡಲಾಯಿತು.

ಸೆಪ್ಟಂಬರ್ 7 ರಂದು ರಾಜ್ಯ ಮುಖ್ಯ ಆಯುಕ್ತರು ಪದಕ ತರಬೇತಿ ಶಿಬಿರವನ್ನು ಕಬ್ಸ್-ಬುಲ್‌ಬುಲ್ಸ್‌ಗಳೊಂದಿಗೆ ಉದ್ಘಾಟಿಸಿದರು. ಸೆಪ್ಟಂಬರ್ 9 ರಂದು ಸರ್ವಧರ್ಮ ಪ್ರಾರ್ಥನೆ ನಡೆಸಲಾಯಿತು. ಮಕ್ಕಳು ಭಾಗವಹಿಸಿ "ದೇವನೊಬ್ಬ ನಾಮ ಹಲವು" ಎಂಬ ಸಂದೇಶವನ್ನು ಸಾರಿದರು. ಇದೇ ದಿನದಂದು ಮೈಸೂರಿನ ಆಕರ್ಷಣೀಯ ಕೇಂದ್ರವಾದ ಮೃಗಾಲಯವನ್ನು ಭೇಟಿ ನೀಡಿದರು. ಶಿಬಿರದ ನಾಯಕತ್ವವನ್ನು ಶ್ರೀಮತಿ ಬಿ. ರೇವತಿ, ಎಲ್.ಟಿ.(ಬುಲ್-ಬುಲ್) ಮತ್ತು ಶ್ರೀಮತಿ ರಾಧಮ್ಮ, ಎಲ್.ಟಿ.(ಕಬ್) ಇವರುಗಳು ವಹಿಸಿದ್ದರು.



ಮೈಸೂರು ಜಿಲ್ಲಾ ಸಂಸ್ಥೆಯ ಶ್ರೀ ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿ, ಶ್ರೀ ಕೆ.ಬಿ. ಗುರುಮೂರ್ತಿ, ಖಜಾಂಚಿಗಳು, ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಆಯುಕ್ತರು, ಜಂಟಿ ಕಾರ್ಯದರ್ಶಿಗಳು, ಜಿಲ್ಲಾ ತರಬೇತಿ ಆಯುಕ್ತರುಗಳು, ಜಿಲ್ಲಾ ಸಂಘಟಕರುಗಳು, ಶಿಬಿರಕ್ಕೆ ಸಂಪೂರ್ಣ ಸಹಕಾರ ನೀಡಿದರು.




## ಬೆಳಗಾವಿ

ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ ಸ್ಥಳೀಯ ಸಂಸ್ಥೆ, ಅಥಣಿ ವತಿಯಿಂದ ತಾಲ್ಲೂಕಿನ ಸಂಕೋನಟ್ಟಿ ಗ್ರಾಮದಲ್ಲಿ ಸರ್ಕಾರಿ ಪ್ರಥಮ ದರ್ಜೆ ಮಹಾವಿದ್ಯಾಲಯದ ರೋವರ್ ಘಟಕದಿಂದ ಸ್ವಚ್ಛ ಭಾರತ್ ಅಭಿಯಾನದ ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಗ್ರಾಮ ಪಂಚಾಯತ್ ಅಧ್ಯಕ್ಷರಾದ ಶ್ರೀ ಅಶೋಕ ಕೌಜಲಗಿ ಇವರು ಅಭಿಯಾನಕ್ಕೆ ಚಾಲನೆ ನೀಡಿದರು.



ಸದರಿ ಕಾರ್ಯಕ್ರಮದಲ್ಲಿ ಗ್ರಾಮದ ಗಣ್ಯವ್ಯಕ್ತಿಗಳಾದ ಶ್ರೀ ಜೆ.ಡಿ. ಧರಿಗೌಡರ, ಸರ್ಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ಮುಖ್ಯೋಪಾಧ್ಯಾಯರಾದ ಶ್ರೀ ಬಿ.ಹೆಚ್. ಮಾಲಗಾರ, ಗೈಡ್ ಕ್ಯಾಪ್ಟನ್ ಶ್ರೀಮತಿ ಡಿ.ಕೆ. ಸನದಿ ಗೈಡ್‌ಗಳೊಂದಿಗೆ ಭಾಗವಹಿಸಿದ್ದರು. ರೋವರ್ ಸ್ಕೌಟ್ ಲೀಡರ್ ಶ್ರೀ ಪಿ.ಆರ್. ಖ್ಯಾಡಿ, ಜಿಲ್ಲಾ ಸಂಘಟಕ ಶ್ರೀ ಡಿ.ಬಿ. ಅತ್ತಾರ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ಶ್ರೀ ಎಸ್.ಎ. ವಾಲಿ, ಶ್ರೀ ಎಸ್.ಎಸ್. ಹೂಟಿ ಹಾಗೂ ರೋವರ್‌ಗಳು ಭಾಗವಹಿಸಿದ್ದು ಊರಲ್ಲಿ ಸ್ವಚ್ಛತೆಯ ಬಗ್ಗೆ ಪ್ರಚಾರ ಮಾಡುತ್ತ ಮನೆಗೊಂದು ಶೌಚಾಲಯವನ್ನು ನಿರ್ಮಿಸಿಕೊಳ್ಳಲು ಜನರಲ್ಲಿ ಜಾಗೃತಿ ಮೂಡಿಸಿದರು.

* ಸೆಪ್ಟೆಂಬರ್ 9 ರಿಂದ 12 ರ ವರೆಗೆ, ಜಿಲ್ಲಾ ಸಂಸ್ಥೆ ಬೆಳಗಾವಿ ವತಿಯಿಂದ ಸಸ್ಯ ಚೇತನ ತರಬೇತಿ ಕೇಂದ್ರ, ದಡ್ಡಿಕಮಲಾಪುರ, ಧಾರವಾಡ ಇಲ್ಲಿ 2017-18 ನೇ ಸಾಲಿನ ಜಿಲ್ಲಾ ಮಟ್ಟದ ನಿಪುಣ್ ಪರೀಕ್ಷಾ ಶಿಬಿರವನ್ನು ಹಮ್ಮಿಕೊಳ್ಳಲಾಗಿತ್ತು. ಶಿಬಿರದ ಉದ್ಘಾಟನೆಯನ್ನು ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಗಜಾನನ ಬ ಮನ್ನಿಕೇರಿ ಸಸಿಗೆ ನೀರು ಹಾಕುವುದರ ಮೂಲಕ ನೆರವೇರಿಸಿದರು.

ಸದರಿ ಪರೀಕ್ಷಾ ಶಿಬಿರದಲ್ಲಿ 206 ರೋವರ್‌ಗಳು, 118 ರೇಂಜರ್ಸ್‌ಗಳು ಭಾಗವಹಿಸಿದ್ದರು. ರೋವರ್ ವಿಭಾಗದ 4 ಗುಂಪುನಾಯಕರುಗಳಾಗಿ ಶ್ರೀ ವಿ.ಎ. ಸಾತಪುತೆ, ಶ್ರೀ ಎಸ್.ಎಸ್. ಕಟ್ಟೀಕಾರ್, ಶ್ರೀ ಪಿ.ಆರ್. ಖ್ಯಾಡಿ, ಆಸ್ತಿ, ಶ್ರೀ ಆರ್.ಎಚ್. ಗಡದನ್ನವರ ಇವರುಗಳು ಕಾರ್ಯನಿರ್ವಹಿಸಿದರು. ರೇಂಜರ್ ವಿಭಾಗದ 2 ಗುಂಪುನಾಯಕರುಗಳಾಗಿ ಶ್ರೀಮತಿ ಪಿ.ಕೆ. ಶಶಿರೇಖಾ, ಶ್ರೀಮತಿ ಎಂ.ಎ. ಸವದತ್ತಿ ಇವರುಗಳು ಕಾರ್ಯನಿರ್ವಹಿಸಿದರು.

ಸೆಪ್ಟಂಬರ್ 11 ರಂದು ಶಿಬಿರದ ಸಮಾರೋಪ ಸಮಾರಂಭ ಜರುಗಿತು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಎಂ.ಎಂ. ಲೋಂಡೆ ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ ಇವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ಪಿ.ಬಿ. ಪಾಟೀಲ, ಜಿಲ್ಲಾ ಆಯುಕ್ತರು(ಗೈಡ್) ಬೆಳಗಾವಿ, ಶ್ರೀ ಎಸ್.ಎಸ್. ಹಾದಿಮನಿ ಸಹಾಯಕ ಜಿಲ್ಲಾ ಆಯುಕ್ತರು, ಸ್ಥಳೀಯ ಸಂಸ್ಥೆ, ಕಿತ್ತೂರ, ಶ್ರೀ ಆರ್. ಎ. ನಿಂಬಾಳಕರ್ ಜಿಲ್ಲಾ ತರಬೇತಿ ಆಯುಕ್ತರು(ಸ್ಕೌ) ಶ್ರೀಮತಿ ಎಲ್.ಎಸ್. ಮಂಗಿ ಜಿಲ್ಲಾ ತರಬೇತಿ ಆಯುಕ್ತರು(ಗೈ) ಉಪಸ್ಥಿತರಿದ್ದರು.

* ಸೆಪ್ಟೆಂಬರ್ 4 ರಂದು ಗೋಕಾಕ್ ಕೆ.ಎಲ್.ಇ. ಶಾಲೆಯ 'ಬಸವೇಶ್ವರ' ಸ್ಕೌಟ್ಸ್ ತಂಡ ಮತ್ತು ಫ್ಲೋರೆನ್ಸ್ ನೈಟಿಂಗ್‌ಗೇಲ್ ಗೈಡ್ಸ್ ತಂಡದವರು ನಗರಸಭೆಗೆ ಭೇಟಿ ನೀಡಿ ನಗರಸಭೆಯವರ ವಿವಿಧ ಕಾರ್ಯಯೋಜನೆಗಳ, ವಿವಿಧ ಸೇವಾ ಕ್ಷೇತ್ರಗಳ ಬಗ್ಗೆ ನಗರಸಭೆಯ ಅಧಿಕಾರಿಗಳಾದ ಶ್ರೀ ಸಾಗರೆ ಮತ್ತು ಶ್ರೀ ತಡಸಲೂರ ಅವರಿಂದ ಮಾಹಿತಿ ಪಡೆದರು.

* ಆಗಸ್ಟ್ 5 ರಂದು ಶಾಲೆಯಲ್ಲಿ ಅಗ್ನಿಶಾಮಕದಳದ ಸಿಬ್ಬಂದಿಯವರಿಂದ 'ಅಣಕು' ಪ್ರದರ್ಶನ ಜರುಗಿತು. ಬೆಂಕಿ ಅನಾಹುತಕ್ಕೆ ಕಾರಣಗಳೇನು? ಬೆಂಕಿ ಅನಾಹುತವಾದಾಗ ಹೇಗೆ ಅದನ್ನು ನಿಯಂತ್ರಣಕ್ಕೆ ತಂದು ನಂದಿಸಬೇಕು, ಈ ಮುಂತಾದ ವಿಷಯಗಳ ಬಗ್ಗೆ ತಿಳಿಸಿಕೊಟ್ಟರು. ಜೊತೆಗೆ ಬೆಂಕಿಯಲ್ಲಿಯ ಪ್ರಕಾರಗಳು ಅವುಗಳನ್ನು ಆರಿಸಲು ಇರುವ ನಂದಕಗಳು, ಅವುಗಳನ್ನು ಉಪಯೋಗಿಸುವ ರೀತಿಯ ಬಗ್ಗೆಯೂ ಹೇಳಿಕೊಟ್ಟರು. ಅಲಾರಮ್ ತಂಡ, ಪ್ರಥಮ ಚಿಕಿತ್ಸಕ ತಂಡ, ಜೀವ ರಕ್ಷಕ ತಂಡ, ಸುರಕ್ಷಾ ತಂಡ ಈ ಮುಂತಾದ ತಂಡಗಳನ್ನು ರಚಿಸಿ, ಅವರುಗಳು ಮಾಡುವ ಕರ್ತವ್ಯಗಳ ಬಗ್ಗೆಯೂ ಕಲಿಸಿಕೊಟ್ಟರು.

* ಆಗಸ್ಟ್ 15 ರಂದು ಸ್ವಾತಂತ್ರ್ಯೋತ್ಸವದ ಅಂಗವಾಗಿ ಗೋಕಾಕ ನಗರದ ವಾಲ್ಮೀಕಿ ಸಾರ್ವಜನಿಕ ಕ್ರೀಡಾಂಗಣದಲ್ಲಿ ಜರುಗಿದ ವಿವಿಧ ಶಾಲೆಗಳ ಪಥಸಂಚಲನ ಸ್ಪರ್ಧೆಯಲ್ಲಿ ಕೆ.ಎಲ್.ಇ., ಎಮ್.ಎಮ್. ಶಾಲೆಯ 'ಬಸವೇಶ್ವರ' ಸ್ಕೌಟ್ ತಂಡವು ಸತತ ಎರಡನೇ ಬಾರಿಗೆ ಮೊದಲನೇ ಸ್ಥಾನವನ್ನು ಪಡೆಯಿತು.

## Bengaluru South



Vijayanagar Local Association conducted Dwitiya Sopan preparatory cum testing camp on 5th & 6th August at Shri Amrutha Vidyalaya, Bengaluru.

The camp was Inagurated by Local Association Secretary Mr. Siddagangaiah .T on August 5th at 9.00 am. 207 Scouts, 151 Guides, 56 Cubs, 18 Bulbuls and 40 Unit Leaders participated in the camp.

Representatives from each section presented their camp impression. District Secretary Mr. M.S. Satish advised and ecnouraged the Campers.

## ಬೀದರ್

ಸೆಪ್ಟೆಂಬರ್ 3 ರಂದು ಸ್ಥಳೀಯ ಸಂಸ್ಥೆ, ಬೀದರ ಹಾಗೂ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರ ಶಿಕ್ಷಣಾಧಿಕಾರಿಯವರ ಸಂಯುಕ್ತಾಶ್ರಯದಲ್ಲಿ ಬೀದರ ಜಿಲ್ಲೆ ಬಸವಕಲ್ಯಾಣ ಪಟ್ಟಣದಲ್ಲಿ ಶ್ರೀ ಬಸವೇಶ್ವರ ಸ್ಕೌಟ್ಸ್ ಹಾಗೂ ಗೈಡ್ಸ್ ಮುಕ್ತದಳವನ್ನು ಉದ್ಘಾಟಿಸಲಾಯಿತು. ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಡಾ॥ ಅಂಬಾದಾಸ, ಇವರು ಜ್ಯೋತಿ ಬೆಳಗಿಸುವುದರ ಮೂಲಕ ಮುಕ್ತದಳಕ್ಕೆ ಚಾಲನೆ ನೀಡಿದರು. ಶ್ರೀ ಶರಣ ಬಸಪ್ಪಾ ಬಿರಾದಾರ, ಕ್ಷೇತ್ರ ಸಂಪನ್ಮೂಲ ವ್ಯಕ್ತಿಗಳು, ಅಧ್ಯಕ್ಷ ಸ್ಥಾನ ವಹಿಸಿದ್ದರು. ಶ್ರೀ ದಿಲೀಪ ಸಾಗಾವೆ, ಅಧ್ಯಕ್ಷರು ಪ್ರಾಥಮಿಕ ಶಾಲಾ ಶಿಕ್ಷಕರ ಸಂಘ ಬಸವಕಲ್ಯಾಣ, ಶ್ರೀ ಸಂಗಣ್ಣಾರಡ್ಡಿ, ಅಕ್ಷರ ದಾಸೋಹ ಯೋಜನಾಧಿಕಾರಿಗಳು, ಬಸವಕಲ್ಯಾಣ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ಅನಿಲಕುಮಾರ ಶಾಸ್ತ್ರೀ ಕಾರ್ಯಕ್ರಮದ ಉಸ್ತುವಾರಿವಹಿಸಿ ಎಲ್ಲರನ್ನು ಸ್ವಾಗತಿಸಿದರು. ಶ್ರೀ ಬಾಬುರಾವ್ ನಿಂಬುರೆ ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ಗುರುಲಿಂಗಪ್ಪಾ ಬಿರಾದಾರ, ಸ್ಕೌಟರ್ ಸ.ಪ.ಪೂ. ಕಾಲೇಜು ಮುಡಬಿ ಇವರು ನಿರೂಪಣೆ ಮಾಡಿದರು. ಶ್ರೀ ಶರಣಪ್ಪಾ ವಾಡೇಕರ ಎಲ್ಲರನ್ನು ವಂದಿಸಿದರು.



* ಆಗಸ್ಟ್ 8 ರಿಂದ 15 ರ ವರೆಗೆ ಸ್ವಾತಂತ್ರೋತ್ಸವ ದಿನಾಚರಣೆ ಕವಾಯತು ಪೂರ್ವ ಸಿದ್ಧತ ಶಿಬಿರ ಹಾಗೂ ಪ್ರಾವೀಣ್ಯತಾ ಪದಕ ಶಿಬಿರವನ್ನು ಆಯೋಜಿಸಲಾಗಿತ್ತು. ಈ ಶಿಬಿರದಲ್ಲಿ 85 ಸ್ಕೌಟ್ಸ್, 62 ಗೈಡ್ಸ್‌ಗಳು ಭಾಗವಹಿಸಿದ್ದರು. ಈ ಶಿಬಿರದಲ್ಲಿ ತೃತೀಯ ಸೋಪಾನ ಹಾಗೂ ರಾಜ್ಯ ಪುರಸ್ಕಾರ ಪ್ರಾವೀಣ್ಯತಾ ಪದಕದ ಬಗ್ಗೆ ಶ್ರೀ ರಾಚಯ್ಯ ನಾಸಿ ರವರು ಬೋಧಿಸಿದರು. ಕವಾಯತನ್ನು ಶ್ರೀ ಪ್ರವೀಣ್ ನೇತೃತ್ವದಲ್ಲಿ ರೋವರ್ಸ್‌ಗಳಾದ ಶ್ರೀ ಶಿವಕುಮಾರ್, ಶ್ರೀ ಶರೀಫ್ ಹಾಗೂ ಶ್ರೀ ನಿಖಿಲ ಕಲಿಸಿಕೊಟ್ಟರು. ಆಗಸ್ಟ್ 15 ರಂದು ಜಿಲ್ಲಾಡಳಿತ ಆಯೋಜಿಸಿದ್ದ ಸ್ವಾತಂತ್ರೋತ್ಸವ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು ಅತ್ಯಾಕರ್ಷಕ ಕವಾಯತನ್ನು ಪ್ರದರ್ಶಿಸಿದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಗುರಮ್ಮಾ ಸಿದ್ಧಾರಡ್ಡಿ ಹಾಗೂ ಜಿಲ್ಲಾ ಆಯುಕ್ತರು(ಗೈಡ್ಸ್) ಆದ ಶ್ರೀಮತಿ ಲೀಲಾವತಿ ಚಕೋತೆ ಈ ಸಂದರ್ಭದಲ್ಲಿ ಸ್ಕೌಟ್-ಗೈಡ್‌ಗಳಿಗೆ ಸಿಹಿ ಹಂಚಿದರು.

* ಆಗಸ್ಟ್ 7 ರಂದು ರಕ್ಷಾ ಬಂಧನ ಕಾರ್ಯಕ್ರಮವನ್ನು ಸ್ಕೌಟ್ಸ್-ಗೈಡ್ಸ್‌ನ ಕಛೇರಿ ನೌಬಾದಲ್ಲಿ ಆಯೋಜಿಸಲಾಗಿತ್ತು. ಮುಖ್ಯ ಅತಿಥಿಗಳಾಗಿ ಶರಣಬಸವೇಶ್ವರ ಬಿ.ಇಡಿ. ಕಾಲೇಜಿನ ಪ್ರಾಚಾರ್ಯರಾದ ಶ್ರೀಸಂತೋಷಕುಮಾರ್ ಸಂಚನ ಭಾಗವಹಿಸಿ ಸ್ಕೌಟ್ಸ್-ಗೈಡ್ಸ್‌ಗಳು, ಸಹೋದರ-ಸಹೋದರಿಯರಂತೆ ಬಾಳಲು ತಿಳಿಸಿ ಮಕ್ಕಳಿಗೆ ಶುಭ ಕೋರಿದರು. ಅಧ್ಯಕ್ಷತೆಯನ್ನು ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಗುರಮ್ಮಾ ಸಿದ್ಧಾರಡ್ಡಿ ರವರು ಈ ಸಂದರ್ಭದಲ್ಲಿ ರಕ್ಷಾ ಬಂಧನದ ಮಹತ್ವವನ್ನು ತಿಳಿಸಿ ಎಲ್ಲಾ ಮಕ್ಕಳಿಗೆ ರಾಕಿಗಳನ್ನು ಕಟ್ಟಿಸಿ ಸಿಹಿ ವಿತರಿಸಿದರು. ಈ ಸಂದರ್ಭದಲ್ಲಿ ಸ್ಕೌಟ್ಸ್ ಶಿಕ್ಷಕ-ಶಿಕ್ಷಕಿಯರು, ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀ ರಾಚಯ್ಯ ನಾಸಿ, ಶ್ರೀ ಕೆ.ಎಸ್. ಚಾಳಕಪೂರ ಕಾರ್ಯಕ್ರಮವನ್ನು ಆಯೋಜಿಸಿದ್ದರು.



* ಆಗಸ್ಟ್ 4 ರಿಂದ 6 ರ ವರೆಗೆ ಬೀದರಿನ ಜ್ವಾಯ್ ಪಬ್ಲಿಕ್ ಶಾಲೆಯಲ್ಲಿ ದ್ವಿತೀಯ ಸೋಪಾನ ಶಿಬಿರ ಆಯೋಜಿಸಲಾಗಿತ್ತು. ಶಿಬಿರದಲ್ಲಿ ಒಟ್ಟು 385 ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಹಾಗೂ ರೋವರ್‌ಗಳು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಬಾಬುರಾವ ನಿಂಬೂರೆ, ಗೈಡ್ಸ್ ವಿಭಾಗಕ್ಕೆ ಶ್ರೀಮತಿ ಜೈಶೀಲಾ ಹಾಗೂ ಕಬ್ಸ್-ಬುಲ್‌ಬುಲ್ಸ್ ವಿಭಾಗಕ್ಕೆ ಶ್ರೀ ಅನೀಲ ಶಾಸ್ತ್ರಿರವರು ಭಾಗವಹಿಸಿದ್ದರು. ಶಿಬಿರವನ್ನು ಉದ್ಘಾಟಿಸಿ ಮಾತನಾಡಿದ ಶ್ರೀಮತಿ ಸಂಧ್ಯಾರಾಣಿ ಪಾಟೀಲ್, ಪ್ರಾಚಾರ್ಯರು ಜ್ವಾಯ್ ಪಬ್ಲಿಕ್ ಶಾಲೆ, ಇವರು ಮಕ್ಕಳಲ್ಲಿ ಶಿಸ್ತನ್ನು ಶಿಬಿರದಲ್ಲಿ ಮಾತ್ರವಲ್ಲದೆ ದಿನನಿತ್ಯದಲ್ಲಿ ಅಳವಡಿಸಿಕೊಂಡು ಹೋಗಲು ತಿಳಿಸಿ, ಶಿಬಿರಕ್ಕೆ ಶುಭ ಕೋರಿದರು. ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಆಗಮಿಸಿದ ಬೀದರ ಜಿಲ್ಲಾ ಸರ್ಕಾರಿ ನೌಕರರ ಸಂಘದ ಅಧ್ಯಕ್ಷರಾದ ಶ್ರೀ ರಾಜೇಂದ್ರ ಗಂದಗೆ ಮಾತನಾಡಿ ಸ್ಕೌಟ್ಸ್-ಗೈಡ್ಸ್‌ಗಳು ರಾಜ್ಯ ಪುರಸ್ಕಾರ ಮತ್ತು ರಾಷ್ಟ್ರಪತಿ ಪುರಸ್ಕಾರಗಳನ್ನು ಪಡೆದು ತಂದೆ-ತಾಯಿಯರಿಗೆ ಹಾಗೂ ಶಾಲೆಗೆ ಕೀರ್ತಿಯನ್ನು ತರಬೇಕೆಂದು ತಿಳಿಸಿದರು. "ಶಿಕ್ಷಕರ ಭವನ"ವನ್ನು ಸ್ಕೌಟ್ಸ್-ಗೈಡ್ಸ್ ತರಬೇತಿಗೆ ಉಚಿತವಾಗಿ ನೀಡುವುದಾಗಿ ತಿಳಿಸಿದರು.

* ಆಗಸ್ಟ್ 2 ರಂದು ಒಂದು ದಿನದ ಹೊರ ಸಂಚಾರ ಶಿಬಿರವನ್ನು ಧುಮಸಾಪೂರದಿಂದ ಪಶು ವಿಶ್ವವಿದ್ಯಾಲಯದ ವರೆಗೆ ಹಮ್ಮಿಕೊಳ್ಳಲಾಗಿತ್ತು. ಇದರಲ್ಲಿ ವಿವಿಧ ಶಾಲೆಯ 112 ಸ್ಕೌಟ್ಸ್, 95 ಗೈಡ್ಸ್, 18 ರೋವರ್ಸ್ ಮತ್ತು 10 ರೇಂಜರ್ಸ್ ಭಾಗವಹಿಸಿದ್ದರು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಯಾದ ಶ್ರೀ ಚಂದ್ರಕಾಂತ ಬೆಳಕುಣಿಯವರು ಹೊರ ಸಂಚಾರ ಶಿಬಿರದ ನಾಯಕತ್ವವನ್ನು ವಹಿಸಿದ್ದರು. ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀಮತಿ ಗುರಮ್ಮಾ ಸಿದ್ಧಾರಡ್ಡಿ ಅವರು ಶಿಬಿರಾರ್ಥಿಗಳನ್ನು ಉದ್ದೇಶಿಸಿ ಮಾತನಾಡಿ ಹೊರ ಸಂಚಾರದಿಂದ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಕೃತಿಪ್ರೇಮ ಮತ್ತು ಧೈರ್ಯ ಬರುವುದಲ್ಲದೆ ಇದರಿಂದ ಮಕ್ಕಳು ಪ್ರಕೃತಿಯ ಮಡಿಲಲ್ಲಿ ಬೆರೆತು ಪ್ರಕೃತಿಯನ್ನು ಪ್ರೀತಿಸುವವರಾಗುತ್ತಾರೆ ಎಂದು ತಿಳಿಸಿದರು.

## ಚಿತ್ರದುರ್ಗ

ಸೆಪ್ಟೆಂಬರ್ 7 ರಂದು ಗುರುಭವನ, ಮೊಳಕಾಲ್ಮೂರು ಇಲ್ಲಿ ತಾಲ್ಲೂಕು ಮಟ್ಟದ ಸ್ಕೌಟರ್-ಗೈಡರ್ ಸಮಾವೇಶ ನಡೆಸಲಾಯಿತು. ಈ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಕೊಂಡ್ಲಹಳ್ಳಿ ರೇವಣ್ಣನವರು ವಹಿಸಿದ್ದರು. ಶ್ರೀ ವಿ.ಜಿ. ಲೋಕೇಶ್, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಮೊಳಕಾಲ್ಮೂರು, ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕಾರ್ಯದರ್ಶಿಗಳು ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್, ಜಿಲ್ಲಾ ಆಯುಕ್ತರು(ಗೈಡ್ಸ್), ಶ್ರೀ ಹನುಮಂತಪ್ಪ ಟಿ.ಪಿ.ಇ.ಓ., ಎಲ್.ಎ. ಖಜಾಂಚಿ, ಶ್ರೀ ಸಣ್ಣ ಯಲ್ಲಪ್ಪ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಅಧ್ಯಕ್ಷರು, ಶ್ರೀ ಪ್ರಸನ್ನ ಕುಮಾರ್, ಇ.ಸಿ.ಓ., ಶ್ರೀ ಹನುಮಂತಪ್ಪ ಬಿ.ಆರ್.ಸಿ. ಶ್ರೀ ಮಲ್ಲಿಕಾರ್ಜುನ್, ಮುಖ್ಯೋಪಾಧ್ಯಾಯರ ಸಂಘದ ಅಧ್ಯಕ್ಷರು. ಡಾ॥ ರಹಮತುಲ್ಲಾ, ಜಿಲ್ಲಾ ಸಹಾಯಕ ಕಾರ್ಯದರ್ಶಿ, ಶ್ರೀ ರಾಜಣ್ಣ ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಕಾರ್ಯದರ್ಶಿ, ಶ್ರೀ ಲಕ್ಷ್ಮಣಪ್ಪ, ಅಕ್ಷರ ದಾಸೋಹ, ವಿವಿಧ ಶಾಲೆಯ ಸ್ಕೌಟ್ಸ್-ಗೈಡ್ಸ್, ಕಬ್ಸ್-ಬುಲ್‌ಬುಲ್ಸ್ ಶಿಕ್ಷಕರು ಹಾಗೂ ವಿದ್ಯಾರ್ಥಿಗಳು, ಮಾಧ್ಯಮ ಮಿತ್ರರು ಭಾಗವಹಿಸಿದ್ದರು.

ಶ್ರೀ ಹನುಮಂತಪ್ಪ ಟಿ.ಪಿ.ಇ.ಓ. ಇವರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಮಕ್ಕಳಲ್ಲಿ ದೈಹಿಕವಾಗಿ ಮಾನಸಿಕವಾಗಿ ಸದೃಢರಾಗಲು ಅನುಕೂಲ ಮಾಡಿಕೊಡುತ್ತದೆ. ಆದ್ದರಿಂದ ಇನ್ನು ಹೆಚ್ಚು ಹೆಚ್ಚು ಘಟಕಗಳನ್ನು ಪ್ರಾರಂಭ ಮಾಡಬೇಕಾಗಿದೆ. ಸೇವೆಯೇ ನಮ್ಮೆಲ್ಲರ ಗುರಿಯಾಗಿರಬೇಕೆಂದು ಹೇಳಿದರು. ಶ್ರೀಮತಿ ಸುನಿತಾ ಮಲ್ಲಿಕಾರ್ಜುನ್ ರವರು ಮಾತನಾಡಿ ಸದ್ಯದಲ್ಲಿ ಶಿಕ್ಷಕ ತರಬೇತಿಯನ್ನು ಹಮ್ಮಿಕೊಳ್ಳುತ್ತೇವೆ ಇದರಿಂದ ಮಕ್ಕಳಿಗೆ ವಿದ್ಯಾಭ್ಯಾಸಕ್ಕೆ ಕೆಲಸಕ್ಕೆ ಉತ್ತಮ ಅವಕಾಶಗಳಿವೆ ಎಂದು ಹೇಳಿದರು. ಶ್ರೀ ವಿ.ಜಿ. ಲೋಕೇಶ್ ಕ್ಷೇತ್ರ ಶಿಕ್ಷಣಾಧಿಕಾರಿಗಳು, ಮೊಳಕಾಲ್ಮೂರು, ಇವರು ಮಾತನಾಡಿ ಮಕ್ಕಳಿಗೆ ಶೈಕ್ಷಣಿಕವಾಗಿ ಬಹಳಷ್ಟು ವಿಶೇಷ ಸೌಲಭ್ಯಗಳಿವೆ, ಆದ್ದರಿಂದ ಎಲ್ಲಾ ಶಾಲೆಗಳಲ್ಲಿ ಯುನಿಟ್ ಪ್ರಾರಂಭಮಾಡಬೇಕು, ದಾನಿಗಳನ್ನು ಹಿಡಿದು ಮಕ್ಕಳಿಗೆ ಸಮವಸ್ತ್ರ ಮುಂತಾದ ಅನುಕೂಲವನ್ನು ಮಾಡಿಕೊಳ್ಳಬಹುದು. ಶಿಕ್ಷಕರಿಗೆ ಉತ್ತಮವಾದ ತರಬೇತಿಯನ್ನು ಕೊಡಿಸಬೇಕು ಎಂದು ಹೇಳಿದರು. ಡಾ॥ ರಹಮತುಲ್ಲಾ ಇವರು ಮಾತನಾಡಿ ಎಲ್ಲಾ ಶಿಕ್ಷಕರು ಉತ್ತಮ ತರಬೇತಿಯನ್ನು ಪಡೆದು ಮಕ್ಕಳಿಗೆ ಉತ್ತಮ ರೀತಿಯ ಕಲಿಕೆಯನ್ನು ಮಾಡಿದರೆ ಅವರ ಭವಿಷ್ಯ ಚೆನ್ನಾಗಿರುತ್ತದೆ ಎಂದು ಹೇಳಿದರು. ಶ್ರೀ ಬಿ. ಹನುಮಂತಪ್ಪ ಬಿ.ಆರ್.ಸಿ. ಇವರು ವಿವಿಧ ಇಲಾಖೆಗಳಲ್ಲಿ ಸೇವೆ ಸಲ್ಲಿಸುತ್ತಿರುವ ಎಲ್ಲರಿಗೂ ಸೇವಾ ಮನೋಭಾವನೆ ಇರಬೇಕು, ಅಂತಹ ಕಾರ್ಯವನ್ನು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಮಾಡುತ್ತದೆ. ಮುಂದಿನ ದಿನಗಳಲ್ಲಿ ನಮ್ಮ ಮೊಳಕಾಲ್ಮೂರು ತಾಲ್ಲೂಕನ್ನು ಉತ್ತಮ ಹಂತಕ್ಕೆ ತರುವಲ್ಲಿ ಸಂಪೂರ್ಣ ಸಹಕಾರ ನೀಡುವುದಾಗಿ ನುಡಿದರು. ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕಾರ್ಯದರ್ಶಿ ಇವರು ಮಾತನಾಡಿ ಎಲ್ಲಾ ಶಿಕ್ಷಕರನ್ನು ಕಡ್ಡಾಯವಾಗಿ ಇದರಲ್ಲಿ ಭಾಗವಹಿಸುವಂತೆ ಮಾಡಬೇಕು ಎಂದು ಹೇಳಿದರು.

ಶ್ರೀ ಕೊಂಡ್ಲಹಳ್ಳಿ ರೇವಣ್ಣ ಇವರು ಅಧ್ಯಕ್ಷತೆಯ ನುಡಿಯಲ್ಲಿ ನಾವೆಲ್ಲಾ ಶಾಲೆ-ಶಾಲೆಗಳಿಗೆ ಹೋಗಿ ಶಿಕ್ಷಕರಿಗೆ ಮನವೊಲಿಸಿ ಶಿಕ್ಷಕರು ಘಟಕಗಳನ್ನು ತೆರೆಯುವಂತೆ ಪ್ರೋತ್ಸಾಹಿಸಬೇಕು. ಎಲ್ಲರಲ್ಲಿ ಶಿಸ್ತು ಇರಬೇಕು ಎಂದರು ಶ್ರೀ ಕೆ.ಟಿ ತಿಪ್ಪೇರುದ್ರಪ್ಪ ಸ್ವಾಗತಿಸಿದರು. ಶ್ರೀ ಕೆ. ರೇವಣ್ಣ ಇವರು ಸರ್ವರನ್ನು ವಂದಿಸಿದರು. ಸಮಾವೇಶದಲ್ಲಿ ಶಿಕ್ಷಕರ ಸ್ಕೌಟ್ಸ್-ಗೈಡ್ಸ್ ದಳ ರಚನೆಯ ಸಮಸ್ಯೆಗಳ ಬಗ್ಗೆ ಚರ್ಚಿಸಲಾಯಿತು. ಸ್ಕೌಟ್ಸ್-ಗೈಡ್ಸ್ ಶಿಕ್ಷಕರ ಪ್ರಶ್ನೆಗಳಿಗೆ ಸೂಕ್ತ ಸಲಹೆಯನ್ನು ನೀಡಲಾಯಿತು. ನಂತರ ಶ್ರೀ ಟಿ. ಕರಿಸಿದ್ದಪ್ಪ ಮತ್ತು ಶ್ರೀ ಬಿ. ಗುರುಮೂರ್ತಿ ಡಿ.ಓ., ಇವರು ಧ್ವಜಾರೋಹಣ ಮತ್ತು ಇನ್ನು ಹಲವು ಕೌಶಲ್ಯಗಳ ಬಗ್ಗೆ ತಿಳಿಸಿದರು.



* ಆಗಸ್ಟ್ 16 ರಂದು ಜಿಲ್ಲಾ ಮಟ್ಟದ ದೇಶಭಕ್ತಿಗೀತಗಾಯ ಸ್ಪರ್ಧೆ ನಡೆಯಿತು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು (ಗೈಡ್ಸ್) ಇವರ ಸ್ವಾಗತ ನೃತ್ಯದೊಂದಿಗೆ ಕಾರ್ಯಕ್ರಮ ಪ್ರಾರಂಭವಾಯಿತು. ಶ್ರೀ ಎಂ. ರೇವಣಸಿದ್ದಪ್ಪ ಉಪ ನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ಚಿತ್ರದುರ್ಗ ಇವರು ಗಣ್ಯ ಮಾನ್ಯರಿಗೆ ಸ್ವಾಗತ ಕೋರಿದರು.

ಮಾನ್ಯ ಶ್ರೀ ಪಿ.ಎನ್. ರವೀಂದ್ರ, ಜಿಲ್ಲಾ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದು, ಶ್ರೀ ಎಂ.ಜೆ. ತಾಜ್‌ಪೀರ್ ಉಪಾಧ್ಯಕ್ಷರು ಜಿಲ್ಲಾಸಂಸ್ಥೆ, ಚಿತ್ರದುರ್ಗ ಮತ್ತು ವೇದಿಕೆ ಮೇಲೆ ಇದ್ದ ಗಣ್ಯರು ಸೇರಿ ಸಸಿಗೆ ನೀರೆ ಎರೆಯುವುದರ ಮೂಲಕ ಕಾರ್ಯಕ್ರಮವನ್ನು ಉದ್ಘಾಟಿಸಿದರು.

ಶ್ರೀ ಎಸ್.ಎಂ. ಜೋಶಿ ಐ.ಪಿ.ಎಸ್. ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಹಾಗೂ ಉಪಾಧ್ಯಕ್ಷರು ಜಿಲ್ಲಾ ಸಂಸ್ಥೆ, ಚಿತ್ರದುರ್ಗ, ಶ್ರೀಮತಿ ಹೇಮಂತಿನಿ ಪ್ರಕಾಶ್, ಉಪಾಧ್ಯಕ್ಷರು ಜಿಲ್ಲಾ ಸಂಸ್ಥೆ, ಚಿತ್ರದುರ್ಗ. ಶ್ರೀಮತಿ ಸುಜಯಾ ಪ್ರಕಾಶ್, ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ, ಚಿತ್ರದುರ್ಗ. ಶ್ರೀ ಬಿ.ಎ. ಲಿಂಗಾರೆಡ್ಡಿ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು(ಗೈಡ್ಸ್) ಡಾ॥ ರಹಮತ್ ಉಲ್ಲಾ ಜಿಲ್ಲಾ ಪ್ರಭಾರಿ ಆಯುಕ್ತರು ಸ್ಕೌಟ್ಸ್ ಜಿಲ್ಲಾ ಸಹಕಾರ್ಯದರ್ಶಿ ಇವರು ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಡಾ॥ ರಹಮತುಲ್ಲಾ, ಜಿಲ್ಲಾ ಸಹಕಾರ್ಯದರ್ಶಿ ಇವರು ಸರ್ವರಿಗೂ ವಂದನೆಗಳನ್ನು ಸಲ್ಲಿಸಿದರು. ಇಲ್ಲಿ ವಿವಿಧ ಶಾಲೆಗಳಿಂದ ಸ್ಕೌಟರ್ಸ್, ಗೈಡರ್ಸ್, ಸ್ಕೌಟ್ಸ್, ಗೈಡ್ಸ್ ಸುಮಾರು 600 ಮಕ್ಕಳು ಭಾಗವಹಿಸಿದ್ದರು. ಹಾಗೂ ಈ ಕಾರ್ಯಕ್ರಮವನ್ನು ವೀಕ್ಷಿಸಲುಪೋಷಕರು, ನಾಗರೀಕರು ಪಾಲ್ಗೊಂಡಿದ್ದರು.

## ದಾವಣಗೆರೆ



* ದಾವಣಗೆರೆ ಜಿಲ್ಲೆಯ ಸಾರ್ವಜನಿಕ ಶಿಕ್ಷಣ ಇಲಾಖೆಯ ನೂತನ ಉಪನಿರ್ದೇಶಕರಾಗಿ ಆಗಮಿಸಿದ್ದ ಶ್ರೀ ಕೆ. ಕೋದಂಡರಾಮ ಇವರನ್ನು ಭಾರತ್ ಸ್ಕೌಟ್ಸ್-ಗೈಡ್ಸ್ ದಾವಣಗೆರೆ ಜಿಲ್ಲಾ ಸಂಸ್ಥೆ ಪರವಾಗಿ ಆಗಸ್ಟ್ 19 ರಂದು ಸ್ವಾಗತಿಸಲಾಯಿತು. ಈ ಸಂದರ್ಭದಲ್ಲಿ ಜಿಲ್ಲಾ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಮಹಮ್ಮದ್ ವಾಸಿಲ್, ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಥಾನಿಕ ಆಯುಕ್ತರಾದ ಶ್ರೀ ಎ. ಶಿವಪ್ಪ, ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ನೂರುಲ್ಲಾ, ಜಿಲ್ಲಾ ಸಂಘಟಕರುಗಳಾದ ಶ್ರೀ ಟಿ.ಎಸ್. ಶಿವಣ್ಣ ಮತ್ತು ಕುಮಾರಿ ಪ್ರಿಯಾಂಕ ಹೆಚ್.ಎಂ. ಉಪಸ್ಥಿತರಿದ್ದರು.

* ಆಗಸ್ಟ್ 19 ರಂದು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ದಾವಣಗೆರೆ ಮತ್ತು ಭಾರತ್ ಸ್ಕೌಟ್ಸ್-ಗೈಡ್ಸ್ ದಾವಣಗೆರೆ ಜಿಲ್ಲಾ ಸಂಸ್ಥೆಯ ಸಹಯೋಗದೊಂದಿಗೆ ಸದ್ಭಾವನಾ ದಿನಚರಣೆಯನ್ನು ಆಚರಿಸಲಾಯಿತು. ಈ ಸಂದರ್ಭದಲ್ಲಿ ಶ್ರೀ ಮಹಮ್ಮದ್ ವಾಸಿಲ್, ಜಿಲ್ಲಾ ಅಧ್ಯಕ್ಷರು, ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀ ನೂರುಲ್ಲಾ, ಜಿಲ್ಲಾ ಕಾರ್ಯದರ್ಶಿ, ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್ಸ್), ಶ್ರೀ ಎ. ಶಿವಪ್ಪ, ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ಟಿ.ಎಸ್. ಶಿವಣ್ಣ, ಕುಮಾರಿ ಪ್ರಿಯಾಂಕ ಹೆಚ್.ಎಂ. ಜಿಲ್ಲಾ ಸಂಘಟಕರುಗಳು, 20 ಸ್ಕೌಟ್ಸ್‌ಗಳು, ಸ್ಥಳೀಯ ಸಂಸ್ಥೆ ಕಾರ್ಯದರ್ಶಿಗಳು, ಸ್ಕೌಟರ್ಸ್ ಗೈಡರ್ಸ್‌ಗಳು ಉಪಸ್ಥಿತರಿದ್ದರು.

* ಆಗಸ್ಟ್ 23 ರಂದು ಸೆಂಟ್ ಪಾಲ್ಸ್ ಕಾನ್ವೆಂಟ್ ಶಾಲೆಯ 64 ಬುಲ್‌ಬುಲ್ಸ್ ಮತ್ತು ಗೈಡ್ಸ್‌ಗಳೊಂದಿಗೆ ಸದ್ಭಾವನಾ ದಿನಾಚರಣೆಯನ್ನು ಆಚರಿಸಲಾಯಿತು. ಗೈಡ್ ಕ್ಯಾಪ್ಟನ್ ಶ್ರೀಮತಿ ನಯನ ವಿಸುಪ್ರಿಯಾ, ಸ್ಕೌಟ್ ಮಾಸ್ಟರ್ ಶ್ರೀ ರವೀಂದ್ರಸ್ವಾಮಿ ಟಿ.ಎಂ. ಉಪಸ್ಥಿತರಿದ್ದರು.

* ಆಗಸ್ಟ್ 30 ರಂದು ರೋಟರಿ ಬಾಲಭವನ, ಪಿ.ಜೆ. ಬಡಾವಣೆ, ದಾವಣಗೆರೆ ಇಲ್ಲಿ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಆಯೋಜಿಸಲಾಗಿತ್ತು. ಜಿಲ್ಲೆಯ ಸುಮಾರು 100 ಸ್ಕೌಟರ್ಸ್-ಗೈಡರ್ಸ್‌ಗಳು ಭಾಗವಹಿಸಿದ್ದರು. ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಮೊಹಮ್ಮದ್ ವಾಸಿಲ್ ವಹಿಸಿದ್ದರು. ಶ್ರೀ ಎ. ಶಿವಪ್ಪ, ಜಿಲ್ಲಾ ಸ್ಥಾನಿಕ ಆಯುಕ್ತರು ಸರ್ವರನ್ನು ಸ್ವಾಗತಿಸಿದರು. ಶ್ರೀಮತಿ ಎಂ. ರತ್ನ ಎ.ಎಲ್.ಟಿ.(ಗೈಡ್) ಪ್ರಾಸ್ತಾವಿಕ ನುಡಿ ನುಡಿದರು. ಶ್ರೀ ಬಸವಲಿಂಗಪ್ಪ, ವಿದ್ಯಾಧಿಕಾರಿಗಳು ಸಾರ್ವಜನಿಕ ಶಿಕ್ಷಣ ಇಲಾಖೆ ಇವರು ಸಮಾವೇಶವನ್ನು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ



ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಮುರುಘರಾಜೇಂದ್ರ ಜೆ. ಚಿಗಟೇರಿಯವರು ತಮ್ಮ 60ನೇ ಹುಟ್ಟುಹಬ್ಬವನ್ನು ಕುಟುಂಬ ಸಮೇತ ಸ್ಕೌಟರ್ಸ್-ಗೈಡರ್ಸ್‌ಗಳೊಂದಿಗೆ ಆಚರಿಸಿಕೊಂಡರು, ಎಲ್ಲಾ ಸ್ಕೌಟರ್ಸ್ ಮತ್ತು ಗೈಡರ್ಸ್‌ಗಳಿಗೆ ಕಿರುಕಾಣಿಕೆ ನೀಡಿದರು. ಹುಟ್ಟುಹಬ್ಬದ ಪ್ರಯುಕ್ತ ಜಿಲ್ಲಾ ಸಂಸ್ಥೆ ಪರವಾಗಿ ಅವರಿಗೆ ಶುಭಾಶಯಗಳನ್ನು ಶ್ರೀಮತಿ ಪುಟ್ಟಮ್ಮ ಮಹಾರುದ್ರಯ್ಯ, ಜಿಲ್ಲಾ ಗೈಡ್ ಆಯುಕ್ತರು ಸಲ್ಲಿಸಿದರು.

ಜಿಲ್ಲಾ ಸಂಸ್ಥೆಯಲ್ಲಿ ಜಿಲ್ಲಾ ಕಾರ್ಯದರ್ಶಿಗಳಾಗಿ ಸೇವೆ ಸಲ್ಲಿಸಿದ ಶ್ರೀ ಎಸ್. ಶಂಕರ್ ನಾಯ್ಕ್ ಹಾಗೂ ರಾಜ್ಯ ಸಹಾಯಕ ಸಂಘಟನಾ ಆಯುಕ್ತರಾಗಿ ಸೇವೆ ಸಲ್ಲಿಸಿದ ಶ್ರೀ ನೂರುಲ್ಲಾ ಇವರಿಗೆ ಜಿಲ್ಲಾ ಸಂಸ್ಥೆ ಪರವಾಗಿ ಅಭಿನಂದನೆ ಸಲ್ಲಿಸಲಾಯಿತು. ಈ ಸಂದರ್ಭದಲ್ಲಿ ಸದ್ಭಾವನಾ ದಿನಾಚರಣೆಯನ್ನು ಆಚರಿಸಲಾಯಿತು. ಶ್ರೀ ಎ.ಪಿ. ಷಡಾಕ್ಷರಪ್ಪ, ಜಿಲ್ಲಾ ಸ್ಕೌಟ್ ಆಯುಕ್ತರು ಪ್ರತಿಜ್ಞೆಯನ್ನು ಬೋಧಿಸಿದರು. ಶ್ರೀ ಎನ್.ಡಿ. ತಮ್ಮಣ್ಣನವರ್, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್) ಇವರು ವಂದಿಸಿದರು.



ಶ್ರೀಮತಿ ಶಾಂತಾ ಎಸ್. ಯಾವಗಲ್, ಸಂಪಾದಕರು, ಜಿಲ್ಲಾ ವಾರ್ತಾ ಪತ್ರಿಕೆ, ಶ್ರೀ ಬೂಸ್ನೂರು ವಿಶ್ವನಾಥ್ ಜಿಲ್ಲಾ ಖಜಾಂಚಿಗಳು, ಶ್ರೀಮತಿ ಆರ್. ಸುಖವಾಣಿ, ಜಿಲ್ಲಾ ಜಂಟಿ ಕಾರ್ಯದರ್ಶಿಗಳು, ಜಿಲ್ಲಾ ಸಹಾಯಕ ಆಯುಕ್ತರುಗಳು ಹಾಗು ಜಿಲ್ಲಾ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ಗದಗ

ಸೆಪ್ಟೆಂಬರ್ 4 ರಂದು ಕೆ.ಎಸ್.ಎಸ್. ಮಹಾವಿದ್ಯಾಲಯದಲ್ಲಿ ರೋವರ್ಸ್-ರೇಂಜರ್ಸ್ ಘಟಕದ ಉದ್ಘಾಟನೆ ಹಾಗೂ ದೀಕ್ಷಾ ಸಮಾರಂಭವನ್ನು ನಡೆಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆಯನ್ನು ಕಾಲೇಜಿನ ಅಧ್ಯಕ್ಷರಾದ ಪ್ರೊ॥ ದಂಡಿನ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀ ಗೋಡಿ, ಪ್ರಾಂಶುಪಾಲರು, ರೋವರ್ ಲೀಡರ್, ಶ್ರೀ ಶಾಂತಕುಮಾರ ಮಲ್ಲಾಪುರ, ಜಿಲ್ಲಾ ಕಾರ್ಯದರ್ಶಿ ಶ್ರೀಮತಿ ದೇವಾಂಗಮಠ ಭಾಗವಹಿಸಿದ್ದರು.



* ಸೆಪ್ಟೆಂಬರ್ 1 ರಂದು ನಗರದ ಪ್ರತಿಷ್ಠಿತ ಕೆ.ಎಲ್.ಇ., ಸಂಸ್ಥೆಯ ಜೆ.ಟಿ. ಮಹಾವಿದ್ಯಾಲಯ 2017-18ನೇ ಸಾಲಿನ ರೋವರ್ ಘಟಕ ಉದ್ಘಾಟನೆ ಮತ್ತು ದೀಕ್ಷಾ ಸಮಾರಂಭದ ಕಾರ್ಯಕ್ರಮ ಜರುಗಿತು. ರೋವರ್ ಘಟಕ ಇರುವಂತೆ ರೇಂಜರ್ ಘಟಕವನ್ನು ಪ್ರಾರಂಭಿಸುವುದರ ಮೂಲಕ ವಿದ್ಯಾರ್ಥಿನಿಯರಿಗೆ ಹೆಚ್ಚಿನ ಅವಕಾಶ ಕಲ್ಪಿಸಿಕೊಡಬೇಕೆಂದು ಮುಖ್ಯ ಅತಿಥಿಯಾಗಿ ಆಗಮಿಸಿದ ಭಾರತ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಆಯುಕ್ತರಾದ (ಗೈಡ್) ಶ್ರೀಮತಿ. ಸುಮಾ ಎಸ್. ಗರಗ ಮಾತನಾಡಿದರು.

ನಂತರದಲ್ಲಿ ಭಾರತ ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಜೆ.ಎಚ್. ಪೂಜಾರರವರು ಸ್ಕೌಟ್ಸ್-ಗೈಡ್ಸ್‌ನ ಸಂಕ್ಷಿಪ್ತವಾದ ಪರಿಚಯವನ್ನು ಮಾಡಿಕೊಟ್ಟರು ಹಾಗೂ ಭಾರತ್ ಸ್ಕೌಟ್ಸ್-ಗೈಡ್ಸ್‌ನ ಸಹಾಯಕ ರಾಜ್ಯ ಸಂಘಟನಾ ಆಯುಕ್ತರಾದ ಶ್ರೀ ಎ.ಎಸ್. ಶಿವಕುಮಾರರವರು ರೋವರ್ಸ್ ವಿದ್ಯಾರ್ಥಿಗಳು ಶಿಸ್ತಿನಿಂದ ಇರಬೇಕು, ಶಿಸ್ತು ಜೀವನದಲ್ಲಿ ಒಳ್ಳೆಯ ವ್ಯಕ್ತಿತ್ವ ನಿರ್ಮಾಣ ಮಾಡುವಂಥದ್ದು ಎಂದು ತಿಳಿಸಿದರು. ಅಧ್ಯಕ್ಷತೆಯನ್ನು ವಹಿಸಿದ ಪ್ರೊ. ಸಿ. ಲಿಂಗಾರೆಡ್ಡಿಯವರು ಎಂಥವರಿಂದಲೆ ಆಗಲಿ ಕಲಿಯಲು ಏನಾದರೂ ಸಿಕ್ಕೇ ಸಿಗುತ್ತದೆ ಎಂದರು. ಕಾರ್ಯಕ್ರಮದಲ್ಲಿ ಎನ್.ಎಸ್.ಎಸ್. ಅಧಿಕಾರಿಗಳಾದ ಪ್ರೊ. ಎಸ್.ಎ. ಬೆಲ್ಲದ, ಡಾ. ವೀಣಾ ಹೂಗಾರ ಪ್ರೊ. ಶ್ರೀಮತಿ. ಎ.ಡಿ. ನಿಡವಣಿ

ಪ್ರೊ. ಶ್ರೀ ಸುರೇಶ್ ಗದಗ ಇವರು ಭಾಗವಹಿಸಿದ್ದರು. ಪ್ರೊ. ಜೆ.ಬಿ. ಶಿರ್ಕೆ ವಂದಿಸಿದರು. ಕಾಲೇಜಿನ ವಿದ್ಯಾರ್ಥಿ ಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಕುರುಬರ ಗಾದಿಲಿಂಗಪ್ಪ ಕಾರ್ಯಕ್ರಮ ನಿರೂಪಿಸಿದರು. ಮಹಾವಿದ್ಯಾಲಯದ ಎನ್.ಎಸ್.ಎಸ್. ರೋವರ್ಸ್, ಬೋಧಕ-ಬೋಧಕೇತರ ವರ್ಗದವರು ಹಾಗೂ ಮಹಾವಿದ್ಯಾಲಯದ ವಿದ್ಯಾರ್ಥಿ-ವಿದ್ಯಾರ್ಥಿನಿಯರು ಉಪಸ್ಥಿತರಿದ್ದರು.

## ಹಾಸನ



"ಭಾರತ್ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಜಾಗತಿಕ ಸೌಹಾರ್ದತೆಗೆ, ಅಂತರಾಷ್ಟ್ರೀಯ ಬಂಧಕ್ಕೆ, ವಿಶ್ವಪ್ರೇಮಕ್ಕಾಗಿ ಒಂದು ಶತಮಾನಕ್ಕೂ ಹೆಚ್ಚು ಕಾಲದಿಂದ ಶ್ರಮಿಸುತ್ತಿದೆ" ಎಂದು ಹೊಳೆನರಸೀಪುರ ಸಾರ್ವಜನಿಕ ಶಿಕ್ಷಣ ಇಲಾಖೆಯ ಕ್ಷೇತ್ರಶಿಕ್ಷಣಾಧಿಕಾರಿಗಳಾದ ಶ್ರೀ ಕೆ. ಯೋಗೀಶ್ ಅಭಿಪ್ರಾಯಪಟ್ಟರು. ಅವರು ಪಟ್ಟಣದಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆಯಿಂದ ನಡೆದ ಸದ್ಭಾವನಾ ದಿನಾಚರಣೆ ಮತ್ತು ಕೋಮು ಸೌಹಾರ್ದ ಪಾಕ್ಷಿಕ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು.

ಈ ಸಂದರ್ಭದಲ್ಲಿ ಪುರಸಭಾ ಮಾಜಿ ಸದಸ್ಯರಾದ ಶ್ರೀ ಹೆಚ್.ಎನ್. ಜನಾರ್ಧನ್, ಯೋಗ ಶಿಕ್ಷಕರಾದ ಶ್ರೀ ಗಣೇಶ್ ಬಾಬು, ಶ್ರೀ ಶಂಕರ್ ನಾರಾಯಣ್ ಐತಾಳ್, ಶ್ರೀ ಮಂಜುನಾಥ್ ಗುಪ್ತ, ಬಿ.ಆರ್.ಸಿ. ಶ್ರೀಮತಿ ಸೌಭಾಗ್ಯ, ಶ್ರೀಮತಿ ಪುಷ್ಪಲತಾ ಮುಂತಾದವರು ಉಪಸ್ಥಿತರಿದ್ದರು.

* "ಪರಿಸರ ನಮಗೆ ಏನು ಕೊಟ್ಟಿದೆ ಎನ್ನುವುದಕ್ಕಿಂತಲೂ ನಾವು ಪರಿಸರಕ್ಕೆ ಏನು ನೀಡಿದ್ದೇವೆ ಎಂಬುದನ್ನು ಪ್ರತಿಯೊಬ್ಬ ಮನುಷ್ಯ ಆಲೋಚಿಸಬೇಕಿದೆ. ಪ್ರಕೃತಿ ಮಾತೆ ನಮಗೆ ಎಲ್ಲವನ್ನೂ ನೀಡಿದ್ದಾಳೆ. ಆದರೆ ನಾವಿಂದು ನಮ್ಮ ದುರಾಸೆಯಿಂದ ಪ್ರಕೃತಿಯನ್ನು ಹಾಳು ಮಾಡುತ್ತಿದ್ದೇವೆ" ಎಂದು, ಭಾರತ್ ಸ್ಕೌಟ್ಸ್-ಗೈಡ್ಸ್, ಬೇಲೂರು ತಾಲ್ಲೂಕು ಸ್ಥಳೀಯ ಸಂಸ್ಥೆಯ ಉಪಾಧ್ಯಕ್ಷರಾದ ಶ್ರೀ ಹೆಚ್.ಆರ್. ಸುರೇಶ್ ಅಭಿಪ್ರಾಯಪಟ್ಟರು.

ಅವರು ಹಳೇಬೀಡಿನ ಎಸ್.ಜಿ.ಆರ್. ಶಾಲೆಯ ನಾಟ್ಯರಾಣಿ ಶಾಂತಲಾ ಗೈಡ್ ಕಂಪನಿ, ಸಳ ಸ್ಕೌಟ್ ಟ್ರೂಪ್‌ನಿಂದ ದೇವಸ್ಥಾನದ ಆವರಣ ಹಾಗೂ ಶಾಲಾ ಮೈದಾನದಲ್ಲಿ ಹಮ್ಮಿಕೊಂಡಿದ್ದ ಸಸಿ ನೆಡುವ ಕಾರ್ಯಕ್ರಮದಲ್ಲಿ ಸಸಿ ನೆಡುವುದರ ಮೂಲಕ, ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಎಸ್.ಜಿ.ಆರ್. ಶಾಲೆಯ ಮುಖ್ಯ ಶಿಕ್ಷಕರಾದ ಶ್ರೀ ಮುಜಿಬರ್ ರೆಹಮಾನ್ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಸ್ವಯಂ ಸೇವಾ ಸಂಸ್ಥೆಯಾಗಿದ್ದು ಎಲ್ಲರೂ ಇದರಲ್ಲಿ ಸ್ವಯಂ ಆಸಕ್ತಿಯಿಂದ ಪಾಲ್ಗೊಳ್ಳಬೇಕಿದೆ. ಆ ಮೂಲಕ ಸಾಮಾಜಿಕ ಜಾಗೃತಿ ಮೂಡಿಸಬೇಕಿದೆ ಎಂದರು.

ಈ ಸಂದರ್ಭದಲ್ಲಿ ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಕೊಟ್ರೇಶ್ ಎಸ್. ಉಪ್ಪಾರ್, ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲಾ, ಏಕಲವ್ಯ ರೋವರ್ಸ್ ಮುಕ್ತದಳದ ಲೀಡರ್ ಶ್ರೀ ಆರ್.ಜಿ. ಗಿರೀಶ್, ತಾಲ್ಲೂಕು ಗೈಡರ್ ಪ್ರತಿನಿಧಿ ಶ್ರೀಮತಿ ಜಿ.ಎಲ್. ಮಮತ, ಎಸ್.ಜಿ.ಆರ್. ಕಿಡ್ಸ್ ಹೋಂ ಕಾರ್ಯದರ್ಶಿ ಶ್ರೀಮತಿ ಮಂಜುಳಾ, ಶಿಕ್ಷಕರಾದ ಸಚಿನ್ ಹಾಗೂ ಸ್ಕೌಟ್, ಗೈಡ್‌ಗಳು ಹಾಜರಿದ್ದರು. ಈ ಸಂದರ್ಭದಲ್ಲಿ 200 ಸಸಿಗಳನ್ನು ನಡೆಸಲಾಯಿತು.

* "ಶಿಸ್ತು ಹಾಗೂ ಸಹನೆ ರೂಢಿಸಿಕೊಳ್ಳಲು ಸ್ಕೌಟ್ಸ್-ಗೈಡ್ಸ್ ಅತ್ಯುತ್ತಮ ವೇದಿಕೆ" ಎಂದು ಪ್ರಥಮ ದರ್ಜೆ ಕಾಲೇಜು ಶಿಕ್ಷಣ ಇಲಾಖೆಯ ಮೈಸೂರು ವಿಭಾಗದ ಜಂಟಿ ನಿರ್ದೇಶಕರಾದ ಶ್ರೀ ಉಮಾನಾಥ್ ಅಭಿಪ್ರಾಯಪಟ್ಟರು. ಅವರು ಹಾಸನದ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯಲ್ಲಿ ಪದವಿ ಪೂರ್ವ ಹಾಗೂ ಪದವಿ ಕಾಲೇಜುಗಳ ಪ್ರಾಂಶುಪಾಲರು ಮತ್ತು ಹಂತದ ರೋವರ್ಸ್-ರೇಂಜರ್ಸ್ ಲೀಡರ್ಸ್‌ಗಳಿಗಾಗಿ "ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್ ಶಿಕ್ಷಣದ ಅನುಷ್ಠಾನ" ಎಂಬ ಒಂದು ದಿನದ ಕಾರ್ಯಾಗಾರವನ್ನು ಉದ್ಘಾಟಿಸಿ ಮಾತನಾಡಿದರು.

ಜಿಲ್ಲಾ ರೋವರ್ ದಳದ ಕೇಂದ್ರ ಸ್ಥಾನಿಕ ಆಯುಕ್ತ ಶ್ರೀ ಜಿ.ಡಿ. ನಾರಾಯಣ ಮಾತನಾಡಿ ಕಾಲೇಜುಗಳಲ್ಲಿ ಸ್ಕೌಟ್ಸ್-ಗೈಡ್ಸ್ ಅಳವಡಿಸಿಕೊಳ್ಳುವುದರಿಂದ ಕಾಲೇಜಿಗೆ ಹಾಗೂ ಸಮಾಜಕ್ಕೆ ಶಿಸ್ತು ಮತ್ತು ಸೇವೆಯ ಕ್ಷೇತ್ರದಲ್ಲಿ ಯುವಪಡೆಯನ್ನು ಕಟ್ಟಲು ಸಹಕಾರಿಯಾಗಲಿದೆ. ಅಲ್ಲದೇ ವಿದ್ಯಾರ್ಥಿಗೆ ಶೈಕ್ಷಣಿಕವಾಗಿಯೂ ವೈಯಕ್ತಿಕವಾಗಿಯೂ ಉತ್ಕೃಷ್ಟ ಸಾಧನೆಯನ್ನು ಮಾಡಲು ಅನುಕೂಲವಾಗಲಿದೆ ಎಂದರು.

ಮುಖ್ಯ ಆಯುಕ್ತ ಡಾ. ವೈ.ಎಸ್. ವೀರಭದ್ರಪ್ಪ ಮಾತನಾಡಿ ಪ್ರಾಥಮಿಕ ಶಾಲೆಯಿಂದ ಪದವಿ ಕಾಲೇಜು ಶಿಕ್ಷಣದ ವೆಗೂ ಇಂದು ಜಾಗತಿಕವಾಗಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಬೆಳೆದಿದೆ. ಈ ದಿಸೆಯಲ್ಲಿ ನಮ್ಮ ಜಿಲ್ಲೆಯಲ್ಲಿ ಎಲ್ಲಾ ಕಾಲೇಜುಗಳಲ್ಲಿಯೂ ರೋವರ್ಸ್-ರೇಂಜರ್ಸ್ ಘಟಕಗಳನ್ನು ತೆರೆದು ಆ ಮೂಲಕ ಯುವಶಕ್ತಿಯನ್ನು ಸನ್ಮಾರ್ಗದಲ್ಲಿ ಕೊಂಡೊಯ್ಯಬೇಕಿದೆ ಎಂದರು. ಈ ಸಂದರ್ಭದಲ್ಲಿ ಜಿಲ್ಲಾ ಪದಾಧಿಕಾರಿಗಳು ಹಾಜರಿದ್ದರು.

* ಸ್ಕೌಟ್ಸ್-ಗೈಡ್ಸ್‌ಗಳಲ್ಲಿ ಶಿಸ್ತು, ಸಂಯಮ ಹಾಗೂ ಸೇವಾಮನೋಭಾವನೆಯನ್ನು ಬೆಳೆಸುವ ನಿಟ್ಟಿನಲ್ಲಿ ಮೂರು ವರ್ಷದಿಂದ ಇಪ್ಪತ್ತೈದು ವರ್ಷದ ವಯೋಮಾನದೊಳಗಿನವರನ್ನು ಮುಖ್ಯ ಗುರಿಯಾಗಿಸಿಕೊಂಡು ಬೇಡನ್ ಪೋವೆಲ್ ರವರು 1907 ರಲ್ಲಿ ಕೇವಲ 20 ಮಕ್ಕಳಿಂದ ಪ್ರಾರಂಭಿಸಿದ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಇಂದು ಜಾಗತಿಕವಾಗಿ ವ್ಯಾಪಿಸಿ ಸುಮಾರು 216 ರಾಷ್ಟ್ರಗಳಲ್ಲಿ ತನ್ನ ಕಾರ್ಯನಿರ್ವಹಿಸುತ್ತಿದೆ" ಎಂದು ಜಿಲ್ಲಾ ಸಂಘಟನಾ ಆಯುಕ್ತರಾದ ಕೊಟ್ರೇಶ್ ಎಸ್. ಉಪ್ಪಾರ್ ಅಭಿಪ್ರಾಯಪಟ್ಟರು.

ಅವರು ಜಿಲ್ಲಾ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಆಲೂರು ಪಟ್ಟಣದ ಪ್ರಥಮ ದರ್ಜೆ ಕಾಲೇಜಿನಲ್ಲಿ ಯಗಚಿ ರೋವರ್ಸ್ ಘಟಕದ "ಮಾಹಿತಿ ಹಂಚಿಕೆ ಕಾರ್ಯಾಗಾರ"ವನ್ನು ಸಸಿ ನೆಡುವುದರ ಮೂಲಕ ಉದ್ಘಾಟಿಸಿ ಮಾತನಾಡಿದರು. ಕಾಲೇಜಿನ ಪ್ರಾಂಶುಪಾಲರಾದ ಶ್ರೀ ಎನ್. ಪುಟ್ಟರಾಜುರವರು ಕಾರ್ಯಗಾರದ ಅಧ್ಯಕ್ಷತೆ ವಹಿಸಿ ಮಾತನಾಡಿ "ಸಂವಿಧನ ನಮಗೆ ಮೂಲಭೂತ ಹಕ್ಕುಗಳನ್ನು ಹಾಗೂ ಮೂಲಭೂತ ಕರ್ತವ್ಯಗಳನ್ನು ಕೊಟ್ಟಿದೆ. ನಾವುಗಳು ಬಹುತೇಕ ಮೂಲಭೂತ ಹಕ್ಕುಗಳನ್ನು ಪಡೆಯಲು ಏನೆಲ್ಲಾ ಪ್ರಯತ್ನ ಮಾಡುತ್ತೇವೆ. ಸೌಲಭ್ಯಗಳಿಗಾಗಿ ಹಾತೊರೆಯುತ್ತೇವೆ. ಆದರೆ ಮೂಲಭೂತ ಕರ್ತವ್ಯಗಳನ್ನು ಜಾರಿಗೆ ತರುವಲ್ಲಿ, ವೈಯಕ್ತಿಕವಾಗಿ ಅಳವಡಿಸಿಕೊಳ್ಳುವಲ್ಲಿ ಹಿಂದೆ ಬೀಳುತ್ತೇವೆ" ಎಂದರು. ಉಪನ್ಯಾಸಕ ಪ್ರೊ.ಡಿ.ಕೆ. ಮಂಜಯ್ಯ ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಯುವಜನತೆಯ ಅಗಾಧ ಶಕ್ತಿಯನ್ನು ಸದ್ಬಳಕೆ ಮಾಡಿಕೊಂಡು ಶಿಸ್ತು ಹಾಗೂ ಸೇವಾಮನೋಭಾವನೆಯಿಂದ ಜಗತ್ತನ್ನು ಬಲಿಷ್ಠಗೊಳಿಸಲು ಬೇಡನ್ ಪೋವೆಲ್ ಸ್ಥಾಪಿಸಿದರು ಎಂದರು.

ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀಮತಿ ಕಾಂಚನಮಾಲಾ ಮಾತನಾಡಿ ಮಕ್ಕಳು ಚಿಕ್ಕವಯಸ್ಸಿನಿಂದಲೇ ಸ್ವಾರ್ಥರಹಿತ ಭಾವನೆಯನ್ನು ಬೆಳೆಸಿಕೊಂಡು ಸಮಸಮಾಜದ ಕನಸು ಕಾಣುತ್ತಾ ಜಾಗತಿಕ ಪ್ರೀತಿಗಾಗಿ ತುಡಿಯಬೇಕಿದೆ ಎಂದರು. ಏಕಲವ್ಯ ರೋವರ್ಸ್ ಮುಕ್ತದಳದ ಲೀಡರ್ ಶ್ರೀ ಆರ್.ಜಿ. ಗಿರೇಶ್ ಮಾತನಾಡಿ ಸಮಾಜ ನಮಗೆ ಏನು ಮಾಡಿದೆ ಎನ್ನುವದಕ್ಕಿಂತ ಸಮಾಜಕ್ಕೆ ನಾವುಗಳು ಏನು ಮಾಡಿದ್ದೇವೆ ಎಂಬ ಸಣ್ಣ ಪ್ರಶ್ನೆ ನಮ್ಮನ್ನು ಕಾಡಿದರೆ ಸಾಕು ಸಮಾಜ ಮುಖಿಯಾಗಲು ದಾರಿಯಾಗುತ್ತದೆ ಎಂದು ನುಡಿದರು. ಈ ಸಂದರ್ಭದಲ್ಲಿ ಯಗಚಿ ರೋವರ್ಸ್ ಲೀಡರ್ಸ್ ಪ್ರೊ. ಕೃಷ್ಣೇಗೌಡ, ಕ.ಸಾ.ಪ ಕೋಶಾಧ್ಯಕ್ಷ ಶ್ರೀ ಆರ್.ಟಿ. ಗುರುಸ್ವಾಮಿ, ಕಾಲೇಜಿನ ಸಿಬ್ಬಂದಿ, ರೋವರ್ಸ್-ರೇಂಜರ್ಸ್ ಹಾಜರಿದ್ದರು.



## ಅಭಿನಂದನೆಗಳು

**ಅಕ್ಷಯ್ ಯು. ತುಪ್ಪದ್ ಆಗಿದ್ದು ಇವರು 2016ನೇ ಸಾಲಿನ ರಾಷ್ಟ್ರಪತಿ ಸ್ಕೌಟ್ ಆಗಿದ್ದು, ಈ ಬಾರಿಯ ರಾಷ್ಟಪತಿ NEET - UG-2017** ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಉತ್ತೀರ್ಣರಾಗಿ, ರಾಷ್ಟ್ರಪತಿ ಸ್ಕೌಟ್ ಕೋಟಾದ ಅಡಿಯಲ್ಲಿ **M.B.B.S.** ಪದವಿಗೆ ಆಯ್ಕೆ ಆಗಿ, ವಿಜಯನಗರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸ್, ಬಳ್ಳಾರಿ, ಕಾಲೇಜಿಗೆ ಸೇರಿರುತ್ತಾರೆ. ಇವರು ಚಿತ್ರದುರ್ಗದ ಶ್ರೀ ಮುರುಘರಾಜೇಂದ್ರ ಓಪನ್ ಸ್ಕೌಟ್ ಟ್ರೂಪ್‌ನ ಸ್ಕೌಟ್ ಆಗಿರುತ್ತಾರೆ.

– ರಾಜ್ಯ ಕಾರ್ಯದರ್ಶಿ



## ಕಾರವಾರ

ಎಸ್.ಡಿ.ಎಂ. ಕಾಲೇಜಿನ ಸಭಾಭವನದಲ್ಲಿ ಹೊನ್ನಾವರ ತಾಲ್ಲೂಕಿನ ಸ್ಥಳೀಯ ಸಂಸ್ಥೆಯ ವತಿಯಿಂದ ಕಾರ್ಯಾಗಾರ ನಡೆಯಿತು. ಮಾನ್ಯ ಉಪನಿರ್ದೇಶಕರಾದ ಶ್ರೀ ಪಿ.ಕೆ. ಪ್ರಕಾಶ್ ಆಗಮಿಸಿ ಹಲವು ಮಾರ್ಗದರ್ಶನ ನೀಡಿದರು. ಶಾಲಾ ಪಠ್ಯದ ಜೊತೆಯಲ್ಲಿ ಶಿಕ್ಷಕರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯಲ್ಲಿ ವಿಶೇಷ ಆಸಕ್ತಿ ವಹಿಸುತ್ತಿರುವುದನ್ನು ಪ್ರಶಂಶಿಸಿದರು.

ಮಧ್ಯಾಹ್ನದ ಅವಧಿಯಲ್ಲಿ ನಡೆದ ಸಭಾಕಾರ್ಯಕ್ರಮದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಕೃಷ್ಣಮೂರ್ತಿ ಭಟ್ಟ ಶಿವಾನಿಯವರು ಅಧ್ಯಕ್ಷತೆ ವಹಿಸಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಗೆ ಯಾವುದೇ ರೀತಿಯ ಸಹಾಯ ಹಸ್ತ ಚಾಚಲು ಸದಾ ಸಿದ್ಧರೆಂದು ತಿಳಿಸಿದರು. ಅತಿಥಿಗಳಾಗಿ ಜಿಲ್ಲಾ ಪಂಚಾಯತ್ ಸದಸ್ಯರು, ಸ್ಕೌಟ್ಸ್-ಗೈಡ್ಸ್‌ನ ಜಿಲ್ಲಾ ಉಪಾಧ್ಯಕ್ಷರೂ ಆದ ಶ್ರೀಮತಿ ಶ್ರೀಕಲಾ ಶಾಸ್ತ್ರೀಯವರು ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿ ಪುರಸ್ಕಾರಗಳ ಜೊತೆಗೆ ಪ್ರತಿಭೆಗೆ ತಕ್ಕ ಪ್ರೇರಣೆಯನ್ನು ಪೂರಕ ವಾತಾವರಣವನ್ನು ಈ ಸಂಸ್ಥೆ ಒದಗಿಸುತ್ತಿದೆ ಎಂದು ಸಂತಸಗೊಂಡರು. ಜಿಲ್ಲಾ ಮುಖ್ಯ ಆಯುಕ್ತರಾದ ಡಾ॥ ಜಿ.ಜಿ. ಸಭಾಹಿತ್ ರವರು ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಚಳವಳಿ ನಡೆದು ಬಂದ ಬಗ್ಗೆ ಇಂದು ಕಂಡುಕೊಳ್ಳುತ್ತಿರುವ ಪ್ರಗತಿ ಇದಕ್ಕೆ ಕಾರಣೀಕೃತರಾದ ಅಧಿಕಾರಿ ವರ್ಗ ಹಾಗೂ ಶಿಕ್ಷಕರನ್ನು ಅಭಿನಂದಿಸಿದರು. ಇದೇ ಸಂದರ್ಭದಲ್ಲಿ ಹೊನ್ನಾವರ ತಾಲ್ಲೂಕಿನ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಜಿ.ಎಸ್. ಭಟ್ಟ ಹಾಗೂ ಮಾನ್ಯ ಉಪನಿರ್ದೇಶಕರಾದ ಶ್ರೀ ಪಿ.ಕೆ. ಪ್ರಕಾಶ್ ರವರನ್ನು ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಯ ವತಿಯಿಂದ ಸನ್ಮಾನಿಸಲಾಯಿತು. ಸನ್ಮಾನಿತರಾದ ಕ್ಷೇತ್ರ ಶಿಕ್ಷಣಾಧಿಕಾರಿಗಳು ಮಾತನಾಡಿ ತಾನು ತಾಲೂಕಿನಲ್ಲಿ ಸಲ್ಲಿಸಿದ ಸೇವೆ ಶಿಕ್ಷಕರ ಸಹಕಾರ ಶಿಕ್ಷಣ ಗುಣಮಟ್ಟ ಎತ್ತರಿಸಲು ಕೈಗೊಂಡ ಕಾರ್ಯಗಳನ್ನು ಇದಕ್ಕೆ ಸಹಕರಿಸಿದ ಸರ್ವರನ್ನು ಸ್ಮರಿಸಿದರು. ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ಜಿ.ಡಿ. ಫರ್ನಾಂಡೀಸ್ ಹಾಗೂ ಎ.ಎಸ್.ಓ.ಸಿ., ಶ್ರೀ ನಾಗೇಶ ಶಿವಪುರ ಇವರು ಶಿಬಿರಾರ್ಥಿಗಳಿಗೆ ತರಬೇತಿ ನೀಡಿ ಸಭಾ ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

ಹಿರಿಯ ಸ್ಕೌಟ್ಸ್ ಶಿಕ್ಷಕರಾದ ಶ್ರೀ ಜಿ.ಆರ್. ಮಡಿವಾಳ ಸ್ವಾಗತಿಸಿದರು. ಕಾರ್ಯದರ್ಶಿಗಳಾದ ಶ್ರೀ ಜನಾರ್ಧನ ನಾಯ್ಕ ವರದಿ ವಾಚಿಸಿದರು. ಶ್ರೀ ಭಾಲಚಂದ್ರ ಭಟ್ಟ ನಿರೂಪಿಸಿದರು. ಶ್ರೀ ಪ್ರಸನ್ನ ಶೇಟ್ ಅಭಿನಂದಿಸಿದರು.

## ರಾಯಚೂರು

ಆಗಸ್ಟ್ 19 ರಂದು ಬಸವಶ್ರೀ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಹಾಗೂ ಸೂಗೂಣಾ ಶಿಕ್ಷಣಾ ಸಂಸ್ಥೆಯ ಸಹಯೋಗದಲ್ಲಿ "ರಾಷ್ಟ್ರೀಯ ಸದ್ಭಾವನಾ" ದಿನಾಚರಣೆಯ ಕಾರ್ಯಕ್ರಮ ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮ ಉದ್ಘಾಟಿಸಿದ ಶ್ರೀಮತಿ ಲಲಿತಾ ಬಸನಗೌಡ, ಜಿಲ್ಲಾ ಸಹಾಯಕ ಆಯುಕ್ತರು(ಗೈ) ಇವರು ಮಾತನಾಡಿ, ಭಾರತ ದೇಶ ವಿವಿಧತೆಯಲ್ಲಿ ಏಕತೆ ಎಂಬುದು ತೋರಿಸಬೇಕಾದರೆ ಎಲ್ಲ ಧರ್ಮ ಹಾಗೂ ಜಾತಿಯ ಜನರು ನಾವೆಲ್ಲರೂ ಭಾರತೀಯರು ಎಂಬುದನ್ನು ತಿಳಿದು ಸೌಹಾರ್ದತೆಯಿಂದ ಬಾಳಬೇಕೆಂದರು.

ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ, ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿ, ಇಂದಿನ ಯುವಕರು ದೇಶಾಭಿಮಾನದಿಂದ ರಾಷ್ಟ್ರಾಭಿವೃದ್ಧಿಗಾಗಿ ಸೌಹಾರ್ದತೆಯನ್ನು ಕಾಪಾಡಿಕೊಂಡು ಸಮಾಜದಲ್ಲಿ ಕೋಮು ಸೌಹಾರ್ದತೆಯಿಂದ ಬಾಳಲು ಜಾಗೃತಿ



ಅಭಿಯಾನದ ಮೂಲಕ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ನಮ್ಮ ಸ್ಕೌಟ್ಸ್-ಗೈಡ್ಸ್‌ಗಳು ಮಾಡಿ, ಸದೃಢ ರಾಷ್ಟ್ರ ಕಟ್ಟಲು ಮುಂದಾಗುವಂತೆ ಕರೆ ನೀಡಿದರು. ಈ ಸಂದರ್ಭದಲ್ಲಿ ಸದ್ಭಾವನಾ ದಿನಾಚರಣೆಯ ಪ್ರತಿಜ್ಞೆಯನ್ನು ಶ್ರೀಮತಿ ವಿಜಯಲಕ್ಷ್ಮಿ, ಜಿಲ್ಲಾ ತರಬೇತಿ ಆಯುಕ್ತರು(ಗೈ) ಇವರು ಬೋಧಿಸಿದರು.

ಈ ಕಾರ್ಯಕ್ರಮದಲ್ಲಿ ಸೂಗೂರಣಾ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಶ್ರೀ ಬಸನಗೌಡ ವಕೀಲ, ಸಂಸೆಯ ಶಿಕ್ಷಕ ವೃಂದದವರು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಶ್ರೀಮತಿ ವಿಜಯಲಕ್ಷ್ಮಿ ಇವರು ಸ್ವಾಗತಿಸಿ ವಂದಿಸಿದರು.

## ಶಿವಮೊಗ್ಗ



* ಆಗಸ್ಟ್ 20 ರಂದು ಶಿವಮೊಗ್ಗ ಜಿಲ್ಲಾ ಸ್ಕೌಟ್ ಭವನದಲ್ಲಿ "ಸದ್ಭಾವನಾ ದಿನಾಚರಣೆ"ಯನ್ನು ಆಚರಿಸಲಾಯಿತು. ಮೊಟ್ಟಮೊದಲನೆಯದಾಗಿ ಸರ್ವಧರ್ಮ ಪ್ರಾರ್ಥನೆಯು ಶ್ರೀಮತಿ ಭಾರತಿ ಡಾಯಸ್ ಎ.ಎಸ್.ಓ.ಸಿ. ರವರ ನಾಯಕತ್ವದಲ್ಲಿ ನಡೆಯಿತು. ನಂತರದಲ್ಲಿ ಶ್ರೀ ಎ.ವಿ. ರಾಜೇಶ, ಜಿಲ್ಲಾ ತರಬೇತಿ ಆಯುಕ್ತರು(ಸ್ಕೌಟ್) ರವರು ಗಣ್ಯವ್ಯಕ್ತಿಗಳನ್ನು ಹಾಗೂ ಸ್ಕೌಟ್ಸ್-ಗೈಡ್ಸ್‌ಗಳನ್ನು ಸ್ವಾಗತಿಸಿದರು.

ಮುಖ್ಯ ಅತಿಥಿಯಾಗಿ ಸಾರ್ವಜನಿಕ ಶಿಕ್ಷಣ ಇಲಾಖೆಯ ದೈಹಿಕ ನಿರ್ದೇಶಕರಾದ ಶ್ರೀ ರಮೇಶ್‌ರವರು ಮಾತನಾಡಿ, ಮಾನಸಿಕ ಹಾಗೂ ಭೌತಿಕವಾಗಿ ಸಮಾಜದಲ್ಲಿ ಗಟ್ಟಿಯಾಗಿ ಮಕ್ಕಳು ನೆಲೆಗೊಳ್ಳಬೇಕು. ತನ್ನ ಶಕ್ತಿ, ಸಾಮರ್ಥ್ಯದ ಮೂಲಕ ಗುರುತಿಸಿಕೊಳ್ಳುವಂತಾಗಬೇಕು ಎಂದು ತಿಳಿಸಿದರು.

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಹೆಚ್.ಡಿ. ರಮೇಶ ಶಾಸ್ತ್ರಿಯವರು ಮಾತನಾಡಿ, ಸದ್ಭಾವನಾ ದಿನಾಚರಣೆಯನ್ನು ನಾವು 365 ದಿನವು ನಡೆಸಬೇಕು, ಪರಿಸರದಲ್ಲಿ ಹರಡಿರುವ ಜಾತೀಯತೆಯನ್ನು ತಡೆಯುವುದೆ ನಮ್ಮ ಕರ್ತವ್ಯವಾಗಿದೆ ಎಂದರು. ನಂತರ ಸದ್ಭಾವನೆಯ ಪ್ರತಿಜ್ಞೆಯನ್ನು ಬೋಧಿಸಿದರು. ಶಿವಮೊಗ್ಗ ಸ್ಥಳೀಯ ಕಾರ್ಯದರ್ಶಿ ಶ್ರೀ ನೂರ್ ಅಹಮದ್, ವಿವಿಧ ಶಾಲೆಯ 100 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು. ಕೊನೆಯಲ್ಲಿ ಶ್ರೀಮತಿ ಭಾರತಿ ಡಾಯಸ ರವರು ಎಲ್ಲರನ್ನು ವಂದಿಸಿದರು.

## ತುಮಕೂರು

* ಆಗಸ್ಟ್ 15 ರಂದು 71ನೇ ಸ್ವಾತಂತ್ರ್ಯೋತ್ಸವ ದಿನದಂದು ನಡೆದ ಪಥಸಂಚಲನದಲ್ಲಿ ಸ್ಕೌಟ್-ಗೈಡ್ ತಂಡಗಳು ಭಾಗವಹಿಸಿ ಪಥ ಸಂಚಲನ ನಡೆಸಿ ಶ್ರೀ ಟಿ.ಬಿ. ಜಯಚಂದ್ರ, ಮಾನ್ಯ ಕಾನೂನು ಮತ್ತು ಸಂಸದೀಯ ಸಚಿವರಿಗೆ ಗೌರವ ರಕ್ಷೆಯನ್ನು ಸಲ್ಲಿಸಿದರು. ಆ ಸಂದರ್ಭದಲ್ಲಿ ತುಮಕೂರು ಜಿಲ್ಲಾಧಿಕಾರಿಗಳು, ಜಿಲ್ಲಾ ಪೊಲೀಸ್ ವರಿಷ್ಠಾಧಿಕಾರಿಗಳು ಉಪಸ್ಥಿತರಿದ್ದರು. ಈ ಪಥಸಂಚಲನದಲ್ಲಿ ಶ್ರೀ ಸಿದ್ಧಗಂಗಾ ಮಠದ ಸ್ಕೌಟ್ ವಿದ್ಯಾರ್ಥಿಗಳ ತಂಡವು ಪ್ರಥಮ ಬಹುಮಾನವನ್ನು ಆರ್ಯನ್ ಪ್ರೌಢಶಾಲೆಯ ವಿದ್ಯಾರ್ಥಿಗಳು ದ್ವಿತೀಯ ಬಹುಮಾನಗಳನ್ನು ಗಳಿಸಿರುತ್ತಾರೆ. ಹಾಗೆಯೇ ಶ್ರೀ ವಿದ್ಯಾನಿಕೇತನ ಪ್ರೌಢಶಾಲೆಯ ಗೈಡ್ ವಿದ್ಯಾರ್ಥಿಗಳು ಪ್ರಥಮ ಬಹುಮಾನ, ಬಟವಾಡಿ ಸೈಂಟ್ ಮೇರಿಸ್ ಶಾಲೆಯ ಗೈಡ್ ವಿದ್ಯಾರ್ಥಿನಿಯರು ದ್ವಿತೀಯ ಬಹುಮಾನವನ್ನು ಗಳಿಸಿರುತ್ತಾರೆ. ಕಲರ್ ಪಾರ್ಟಿಯಲ್ಲಿ ಪ್ರಥಮ ಬಹುಮಾನವನ್ನು ರೆಡ್ ಕ್ರಾಸ್ ಸಂಸ್ಥೆಯ ಗೈಡ್ ಕಲರ್ ಪಾರ್ಟಿ ವಿದ್ಯಾರ್ಥಿಗಳು ಹಾಗೂ ತುಮಕೂರಿನ ಗಾಂಧಿ ನಗರದ ಸೈಂಟ್ ಮೇರಿಸ್ ಶಾಲೆಯ ಗೈಡ್ ವಿದ್ಯಾರ್ಥಿಗಳು ಪ್ರಥಮ ಬಹುಮಾನವನ್ನು ಗಳಿಸಿರುತ್ತಾರೆ.



## ಉಡುಪಿ



ಸದ್ಭಾವನಾ ದಿನಾಚರಣೆಯ ಅಂಗವಾಗಿ ಸರ್ವಧರ್ಮ ಪ್ರಾರ್ಥನೆಯನ್ನು ರೋವರ್-ರೇಂಜರ್ ಘಟಕದ ವತಿಯಿಂದ ಸಂತ ಮೇರಿ ಕಾಲೇಜಿನಲ್ಲಿ ಹಮ್ಮಿಕೊಳ್ಳಲಾಯಿತು. ಕಾಲೇಜಿನ ರೋವರ್ ಸ್ಕೌಟ್ ಲೀಡರ್ ಅಸಿಸ್ಟೆಂಟ್ ಪ್ರೊ. ಪ್ರಕಾಶ್ ಇವರ ನೇತೃತ್ವದಲ್ಲಿ ರೋವರ್-ರೇಂಜರ್‌ಗಳು ವಿವಿಧ ಧರ್ಮಗಳ ಧರ್ಮಗ್ರಂಥವನ್ನು ಪಠಿಸುವುದರೊಂದಿಗೆ ಸರ್ವಧರ್ಮ ಪ್ರಾರ್ಥನೆಯನ್ನು ಮಾಡಿದರು. ಈ ಕಾರ್ಯಕ್ರಮದಲ್ಲಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ. ರಾಜನ್ ವಿ.ಎನ್. ಉಡುಪಿ ಜಿಲ್ಲಾ ಸ್ಕೌಟ್-ಗೈಡ್‌ನ ಶ್ರೀ ನಿತಿನ್ ಅಮೀನ್, ಕಾಲೇಜಿನ ರೇಂಜರ್ ಲೀಡರ್‌ಗಳಾದ ಅಸಿಸ್ಟೆಂಟ್ ಪ್ರೊ. ಸಂಗೀತಾ, ಅಸಿಸ್ಟೆಂಟ್ ಸಂಘಟಕ ಪ್ರೊ. ಸುಷ್ಮಾ ಹಾಗೂ ಕಾಲೇಜಿನ ಎಲ್ಲಾ ರೋವರ್-ರೇಂಜರ್‌ಗಳು, ಉಪನ್ಯಾಸಕರು ಉಪಸ್ಥಿತರಿದ್ದರು.

## ವಿಜಯಪುರ



ವಿಜಯಪುರ ಜಿಲ್ಲಾ ಸ್ಕೌಟ್ ಗೈಡ್ ತರಬೇತಿ ಕೇಂದ್ರದ ಅಭಿವೃದ್ಧಿಗೆ ಶ್ರೀಮತಿ ಅರುಣಾದೇವಿ 10 ಸಾವಿರ ರೂಗಳನ್ನು ಸೆಪ್ಟೆಂಬರ್ 16 ರಂದು ನಗದು ದೇಣಿಗೆಯಾಗಿ ನೀಡಿದರು. ಅದರಂತೆ ಜಿಲ್ಲಾ ಜಂಟಿ ಕಾರ್ಯದರ್ಶಿ ಶ್ರೀ ಡಿ.ಎಲ್. ಪಿಂಜಾರ ಅವರು ಜಿಲ್ಲಾ ಸಂಸ್ಥೆಗೆ 23 ಸಾವಿರ ಮೌಲ್ಯದ ಖುರ್ಚಿಗೆ ಮೇಜು ದೇಣಿಗೆ ನೀಡಿದರು.

ಜಿಲ್ಲಾ ಕಾರ್ಯಾಲಯದಲ್ಲಿ ಜಿಲ್ಲೆಯ ಎಲ್ಲ ತಾಲ್ಲೂಕಾ ಕಾರ್ಯದರ್ಶಿಗಳ ಹಾಗೂ ವೃಕ್ಷಮಣಿದಾರಕರ ಸಭೆ ನಡೆಯುತ್ತಿದ್ದ ವೇಳೆ ಆಗಮಿಸಿದ ಶ್ರೀಮತಿ ಅರುಣಾದೇವಿಯವರು ನೀಡಿದ ದೇಣಿಗೆ ಸ್ವೀಕರಿಸಿ ಜಿಲ್ಲಾ ಸಂಸ್ಥೆಯಿಂದ ಅಭಿನಂದನೆಗಳನ್ನು ಸಲ್ಲಿಸಿದರು.

ನಂತರ ಮುಂದುವರಿದ ಸಭೆಯಲ್ಲಿ ಸಭೆಯ ಅಧ್ಯಕ್ಷತೆ ವಹಿಸಿದ್ದ ಶ್ರೀ ಪಿ.ಎಸ್. ಕುಂಬಾರ ಅವರು ಮುಂಬರುವ ದಿನಗಳಲ್ಲಿ ಜಿಲ್ಲಾ ಹಾಗೂ ತಾಲೂಕಾ ಸಂಸ್ಥೆಗಳು ಶಿಕ್ಷಕರಿಗಾಗಿ ಮತ್ತು ಮಕ್ಕಳಿಗಾಗಿ ಹಮ್ಮಿಕೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ ಚರ್ಚಿಸಿದರು. ಶ್ರೀ ಕುಂಬಾರ ಅವರು ಸ್ವಾಗತಿಸಿದರೆ, ಶ್ರೀ ಬಿ.ಎಚ್. ಹೂಗಾರ ವಂದಿಸಿದರು.

* ಸೆಪ್ಟೆಂಬರ್ 16 ರಂದು ಗೋಲಗುಂಬಜ ಆವರಣದಲ್ಲಿ ಸ್ವಚ್ಛಭಾರತ್ ಅಭಿಯಾನದ ಪ್ರಯುಕ್ತ ಹಮ್ಮಿಕೊಂಡ "ಐತಿಹಾಸಿಕ ಸ್ಮಾರಕಗಳ ರಕ್ಷಣೆ ಹಾಗೂ ಸ್ವಚ್ಛತೆ ದತ್ತು ಯೋಜನೆ" ಯ ಉದ್ಘಾಟನಾ ಕಾರ್ಯಕ್ರಮ ಆಯೋಜಿಸಿತ್ತು.

ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ಧಾರವಾಡ ವಲಯದ ಪುರಾತತ್ವ ಇಲಾಖೆಯ ಡಿ. ವೈ. ಎಸ್.ಎ. ಶ್ರೀ ಭಗತ್ ರವರು ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಬಾಳಿಕಾಯಿ, ಅವರು ಎನ್.ಸಿ.ಸಿ. ಅಧಿಕಾರಿಗಳಾದ ಶ್ರೀ ನವದೀಪ ಸಿಂಗ್ ಮುಲ್ತಾನಿ ಹಾಗೂ ಶ್ರೀ ಸಮ್ಮೀದ ಆಗಮಿಸಿದ್ದರು. ಸ್ಥಳೀಯ ಅಧಿಕಾರಿಗಳಾದ ಶ್ರೀ ಮೌನೇಶ ಕುರವತ್ತಿ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಗೈಡ್ ಆಯುಕ್ತೆ ಶ್ರೀಮತಿ ಅರುಂಧತಿ ಡಿ. ರಾಜ್ಯ ಸ್ಕೌಟ್ ಪ್ರತಿನಿಧಿ ಶ್ರೀ ಎಸ್.ಎಸ್. ಬೊಮ್ಮನಹಳ್ಳಿ ಜಿಲ್ಲಾ ಸಂಘಟಕ ಶ್ರೀ ಪ್ರಕಾಶ ಹದ್ಲಿ, ಶ್ರೀ ಎ.ಎಮ್. ಖೋತ ಸ್ಕೌಟ್ ಮಾಸ್ಟರ್ ಶ್ರೀ ಎಸ್.ಆರ್. ಮೂಡಲಗಿ ಪ್ರಕಾಶ ಪೂಜಾರಿ ಹಾಗೂ 128 ಸ್ಕೌಟ್ಸ್-ಗೈಡ್ಸ್‌ಗಳು ಪಾಲ್ಗೊಂಡಿದ್ದರು.

ಗೋಲ ಗುಂಭಜ ಹಾಗೂ ಇಬ್ರಾಹಿಂ ರೋಜಾ ಸ್ಮಾರಕದ ಆವರಣವನ್ನು ಸ್ಕೌಟ್ಸ್-ಗೈಡ್ಸ್ ಮಕ್ಕಳಿಂದ ಹಾಗೂ ಅತಿಥಿಗಳಿಂದ ಸ್ವಚ್ಛಗೊಳಿಸುವ ಮೂಲಕ "ಸ್ವಚ್ಛ ಭಾರತ್" ಆಂದೋಲನಕ್ಕೆ ಚಾಲನೆ ನೀಡಲಾಯಿತು.

## TRIBUTES TO THE REVERED MEMORY OF Smt. SAROJA V.NAIDU

### Vice - President & Life Trustee of Karnataka State Bharat Scouts & Guides Trust, Who Passed Away On Monday The 18 September 2017 At Bengaluru



Smt Saroja V. Naidu was born on 9th August 1927 at Mysore. Her mother Smt.Lakshmi Bai was a devoted house wife, while father Krishnaji Rao worked in Government Service. She had her early education in Mysore and passed matriculation with very high percentage. She studied B.A in Mysore Maharani's College and graduated from Mysore University. She actively participated in sports and debates and bagged many prizes during her Student Career.

Smt Saroja V. Naidu after her marriage to Dr. Venkataramana Naidu left for U.S.A in 1967 and stayed there almost for 35 years. When her husband met with a serious accident, she was courageous to undergo training in Occupational Therapy and worked as Occupational Therapist in Mental Health Institute in USA to take care of her husband. Looking at her achievements and indomitable courage, Indian Americans in USA bestowed her the title of "VEERA MAHILE".

Below are the list of Donations given to the Bharat Scouts and Guides organizations in the State from Smt Saroja V. Naidu.

- Provided Founds for Sodium Light Poles & Water Connection through Borewell Faciliteis to the Campers & Trainers from BWSSB at Shanthigruha Caupus.
- Donated Funds for Construction of Kitchen Complex to Dharwad District Scouts and Guides Training Centre, Satyachetana.
- Donated L.C.D. Projector to National Training Centre, Bharat Scouts and Guides, Pachmarhi, Madhya Pradesh where she finished her Commissioners Training & Advanced Course.
- Donated L.C.D. Projector along with printer to Shantigruha Campus.
- Donated for an Entrance gate to BS & G Building at Pilikula Training Centre, Dakshina Kannada.

She has recently donated a sum of Rs 2 Lakhs to Bharat Scouts and Guides, Karnataka for purchase of Bunker Cots to the newly Constructed Guest House at Shanthigruha, Palace Road, Bengaluru.

Smt Saroja V. Naidu's total donation to different Organisations/Institutions, Individuals all over Karnataka exceeds more than Rs.3 crores.

Smt. Saroja V. Naidu is honored by many Organizations at National and International Level for her singular and unique contributions. They are Lions Melvin



Johnes Fellow, Bharat Scouts and Guides Fellow and Distinguished Highest Award of Silver Elephant, All India Women's Day Award, Rotary International Paul Harri's Fellowship, Lions Clubs International Presidents Appreciation Award, Multiple Lions District and South India Lionees Award are a few of the awards and honors, she has received for her Meritorious and Distinguished services to the Institutions and Organisations for More than Four decades.

Looking back at Smt. Saroja V. Naidu's biography and achievements, it is very difficult to comprehend as to how an individual can accomplish so many exemplary achievements. It is really a great fulfilling experience to all those who are fortunate to have come across and touched her life. She was full of kindness and nobility.



Smt Saroja.V. Naidu attended the 99th State Council Meeting held at Dr. Annie Besant Training Centre, Doddaballapur on Sunday the 10th September 2017 and exchanged pleasantries with all the Scout/Guide Volunteers of the State gathered at this annual meeting and she was gracious enough to Wish and Bless all of them. Including State Chief Commissioner Sri. P.G.R. Sindhia. No body dreamt that her end will come so soon which is indeed a great Shock to all the volunteers of the movement. It is indeed a great loss to Scout/Guide Movement in particular and to the Society.

**MAY HER SOUL REST IN PEACE**



**Smt. Saroja V. Naidu, was honoured by State Chief Commissioner Sri P.G.R. Sindhia at the 99th Sate Council Meeting held at Dr. Annie Besant Training Centre on 10th September 2017.**



# My Experience at Kaulalumpur Girl Guides International Camp

The KLGG International Camp was held from the 25th of August to the 29th 2017. We also met the other International participants from UK, Pakistan, Maldieves etc.

As we reached the campsite we did our registration and we were shown our dorms. After our lunch we had practice for the opening night. The theme of the opening night was "COME AND EXPERIENCE THE WARMTH OF FRIENDSHIP". There was GALA FLAG PARADE with all the flag bearers of the different countries. There was ceremony where all the contingent leaders had to be on stage. As there was no leader from our country I was chosen to be the leader. It was a proud moment for me to represent the country as a leader.

The next day, that is on the 26th, we began with our station activities which were grouped into 2 categories i.e. adventure and culture. All the activities were very lively. We had different adventurous activities such as Flying Fox, Kayaking. We were taught the traditional dance of China i.e., the fan dance by a queen guide of Malaysia. It was a wonderful experience. At night we had the INTERNATIONAL NIGHT where all the guides had to wear their traditional costumes. The International participants were asked to give a performance.



Our sister guide Varsha performed a traditional dance from their state, Ashitha and I performed the popular Hindi song Pal Pal Har Pal. We enjoyed the performance of the other countries as well. On the International night the theme for dinner was MALASYIA world. They were Christmas Special, Diwali Traditional Special, Mughalai Special and Chinese New Year dishes.

On the next day i.e., on the 27th we continued with our station activities which included adventurous activities like Orienteering, Water Confidence. The last station was wearing of traditional costume. At Market and savouries, everyone tasted our snacks and they loved the variety of Indian flavours. In addition we also kept some booths and got to know a lot about their culture and heritage.

The next morning we got ready and we had an outing to Kuala Lumpur. First we visited the famous Petronas Twin Towers, we also saw the Convention Centre for the 29th Southeast Asian games. Then we walked merrily through the Aircon Sky Bridge to the Pavilion singing the song "The More we Get Together".

On the last day we had the closing ceremony in the moring. In the official ceremony I presented a speech on behalf of The Bharat Scouts and Guides thanking the organizers for putting up such a wonderful event and for the wonderful hospitality.

I returned home with a galore of memories and friends with whom we'll be in touch for years to come. I'm certainly looking forward for attending many more Jamborees in the future.

**– Pinto Shalon Suzanne**

Guide from "Shanthi Guide Company", St. Agnes High School, Mangaluru

## 2016-17ನೇ ಸಾಲಿನಲ್ಲಿ ಉತ್ತಮ ಕಾರ್ಯ ಹಾಗೂ ಸಂಘಟನೆಗಾಗಿ ರಾಜ್ಯ ಮಟ್ಟದ ಪರ್ಯಾಯ ಪಲಕ ಮತ್ತು ಪಾರಿತೋಷಕಗಳನ್ನು ಕೆಳಕಂಡ ಜಿಲ್ಲೆಗಳಿಗೆ ಸೆಪ್ಟೆಂಬರ್ 10, 2017ರಂದು ಜರುಗಿದ 99ನೇ ರಾಜ್ಯ ಪರಿಷತ್ ಸಭೆಯಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಪ್ರಧಾನ ಮಾಡಿದರು.



ಪ್ರಥಮ ಸ್ಥಾನ : ದಕ್ಷಿಣ ಕನ್ನಡ ಜಿಲ್ಲೆ

ಅಬ್ದುಲ್ ಗಫಾರ್ ಪರ್ಯಾಯ ಪಲಕ



ದ್ವಿತೀಯ ಸ್ಥಾನ : ಉಡುಪಿ ಜಿಲ್ಲೆ

ಜಸ್ಟೀಸ್ ಕೆ. ಶಂಕರನಾರಾಯಣರಾವ್ ಪರ್ಯಾಯ ಪಲಕ



ತೃತೀಯ ಸ್ಥಾನ : ದಾವಣಗೆರೆ ಜಿಲ್ಲೆ

ಮೇಜರ್ ವೈ.ವಿ.ಕೆ. ಮೂರ್ತಿ ಪರ್ಯಾಯ ಪಲಕ







99ನೇ ರಾಜ್ಯ ಪರಿಷತ್ ಸಭೆಯಲ್ಲಿ ಭಾಗವಹಿಸಿದ್ದ ಆಯುಕ್ತರುಗಳು ಮತ್ತು ಸದಸ್ಯರುಗಳ ವಿಹಂಗಮನೋಟ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2015-17
Licensed to Post Without Prepayment License WPP NO. 340, Date of Publishing 28th of Every [illegible]
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 32)

## ಜಿಲ್ಲಾ ಸಂಸ್ಥೆಗಳ ಆಶ್ರಯದಲ್ಲಿ ಜರುಗಿದ ವಿವಿಧ ಕಾರ್ಯಕ್ರಮಗಳ ವಿಹಂಗಮ ನೋಟ



ತುಮಕೂರು ಜಿಲ್ಲೆಯಲ್ಲಿ ಜರುಗಿದ "ಸ್ವಚ್ಛಭಾರತ ಹಾಗೂ ಸದ್ಭಾವನಾ ದಿನಾಚರಣೆ" ಕಾರ್ಯಕ್ರಮದ ಉದ್ಘಾಟನೆಯಲ್ಲಿ ಜಿಲ್ಲಾ ಪದಾಧಿಕಾರಿಗಳು



ಹಾಸನದಲ್ಲಿ ಜರುಗಿದ ವನಮಹೋತ್ಸವ ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು, ದಳನಾಯಕ-ನಾಯಕಿಯರು.



ಉಡುಪಿ ಜಿಲ್ಲೆಯಲ್ಲಿ ಜರುಗಿದ "ಸ್ವಚ್ಛಭಾರತ ಅಭಿಯಾನ" ಕಾರ್ಯಕ್ರಮದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳು



ಚಾಮರಾಜನಗರ ಜಿಲ್ಲೆ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದು



ಬೀದರ್ ಜಿಲ್ಲೆಯಲ್ಲಿ ಜರುಗಿದ ಹೊರ ಸಂಚಾರ ಕಾರ್ಯಕ್ರಮದಲ್ಲಿ ಭಾಗವಹಿಸಿದ ಸ್ಕೌಟ್ಸ್-ಗೈಡ್ಸ್‌ಗಳು



ದಕ್ಷಿಣ ಕನ್ನಡ ಜಿಲ್ಲೆ ಸ್ಕೌಟ್ಸ್-ಗೈಡ್ಸ್‌ಗಳು ಸ್ವಚ್ಛತಾ ಕಾರ್ಯಕ್ರಮದಲ್ಲಿ ಭಾಗವಹಿಸಿರುವುದು



If not delivered, please return to :
THE EDITOR, Karnataka Scout & Guide
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha**, #39, Palace Road, Bengaluru - 560 001. **Publisher & Editor : Siddaiah**, IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26